# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **259**
ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವ ದಿನಾಂಕ : 16.02.2022
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಪಿ.ಟಿ.ಸಿ.ಎಲ್. ಕಾಯ್ದೆಯ ವ್ಯಾಪ್ತಿಗೆ ಒಳಪಡುವ ಜಮೀನುಗಳನ್ನು ಪರಭಾರೆ ಹಾಗೂ ಮಾರಾಟಕ್ಕೆ ಅವಕಾಶ ಕಲ್ಪಿಸದೆ ಷರತ್ತುಗಳನ್ನು ವಿಧಿಸಿ ವಾಸ್ತವ್ಯ ಹಾಗೂ ಸ್ವಂತ ಉದ್ಯಮ ನಡೆಸಲು ವಾಣಿಜ್ಯ ಉದ್ದೇಶಗಳಿಗೆ ಭೂ-ಪರಿವರ್ತನೆಗೆ ಅವಕಾಶ ನೀಡುವಲ್ಲಿ ಸರ್ಕಾರದ ನಿಲುವೇನು; | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಸರ್ಕಾರವು ಮಂಜೂರು ಮಾಡುವ ಜಮೀನಿನ ಮೂಲ ಉದ್ದೇಶವು ಕೃಷಿ ಚಟುವಟಿಕೆಯಾಗಿರುತ್ತದೆ. ಅಂತಹ ಜಮೀನುಗಳು ಕೃಷಿಯೇತರ ಚಟುವಟಿಕೆಗಳಿಗೆ ಭೂ ಪರಿವರ್ತನೆಯಾದಲ್ಲಿ ಸದರಿ ಜಮೀನು ಮಂಜೂರಾದ ಭೂಮಿ ಎಂಬ ವ್ಯಾಖ್ಯಾನದಿಂದ ಹೊರತಾಗುತ್ತದೆ ಹಾಗೂ ಭೂ ಮಂಜೂರಾತಿ ನಿಬಂಧನೆಗಳನ್ನು ಉಲ್ಲಂಘಿಸಿದಂತಾಗುತ್ತದೆ. ಮುಂದುವರೆದು ಕೆಲವು ಸ್ಥಾಪಿತ ಹಿತಾಸಕ್ತಿಗಳು ಪಿಟಿಸಿಎಲ್ ಕಾಯ್ದೆಯ ವ್ಯಾಪ್ತಿಗೊಳಪಡುವ ಜಮೀನುಗಳನ್ನು ಸರ್ಕಾರದಿಂದ ಅನುಮತಿ ಪಡೆಯದೇ, ಭೂ ಪರಿವರ್ತನೆ ಮಾಡಿ ಮಾರಾಟ ಮಾಡುವುದನ್ನು ತಪ್ಪಿಸಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಜನರು ಭೂರಹಿತರಾಗುವುದನ್ನು ತಡೆಯಲು ಕಲಂ 4(2)ರಡಿ ಕಡ್ಡಾಯವಾಗಿ ಸರ್ಕಾರದ ಪೂರ್ವಾನುಮತಿ ಪಡೆಯುವುದು ಅವಶ್ಯಕವಾಗಿರುತ್ತದೆ.<br><br>ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಲು ಹಾಗೂ ಈ ವರ್ಗದವರು ಸಮಾಜದ ಮುಖ್ಯವಾಹಿನಿಯಲ್ಲಿ ಸ್ವಾವಲಂಬನೆಯಿಂದ ಜೀವಿಸಲು ಅನುಕೂಲವಾಗುವಂತೆ ಸರ್ಕಾರವು ಸದರಿ ವರ್ಗದವರಿಗೆ ಕೃಷಿ ಚಟುವಟಿಕೆಗಳಿಗಾಗಿ ಜಮೀನುಗಳನ್ನು ಮಂಜೂರು ಮಾಡಿದೆ.<br><br>ಸದರಿ ಜಮೀನುಗಳು ಮಂಜೂರಾಗಿದ್ದರೂ ಸಹ ಅಂತಹ ಜಮೀನುಗಳ ಮೇಲೆ ಸರ್ಕಾರದ ಹಕ್ಕುಗಳು ಅಸ್ತಿತ್ವವನ್ನು ಕಳೆದುಕೊಂಡಿರುವುದಿಲ್ಲ. ಮಂಜೂರಾತಿ ಜಮೀನುಗಳನ್ನು ಪರಭಾರೆ ಮಾಡಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ಕೆಲವೊಂದು ಜಮೀನುಗಳ ಪರಭಾರೆ ನಿಷೇಧ) ಕಾಯ್ದೆ, 1978 ಅನ್ವಯ ಸರ್ಕಾರದ ಪೂರ್ವಾನುಮೋದನೆಯ ಅಗತ್ಯವಿರುವುದು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಭೂ ರಹಿತರಾಗುವುದನ್ನು ತಡೆಗಟ್ಟುವ ಸದುದ್ದೇಶವನ್ನು ಹೊಂದಿದೆ.<br><br>ಆದ್ದರಿಂದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ (ಕೆಲವೊಂದು ಜಮೀನುಗಳ ಪರಭಾರೆ ನಿಷೇಧ) ಕಾಯ್ದೆ, 1978ರ ಧ್ಯೇಯೋದ್ದೇಶಗಳನ್ನು ಗಂಭೀರವಾಗಿ ಪಾಲಿಸುವ ದೃಷ್ಟಿಯಿಂದ ಭೂ ಪರಿವರ್ತನೆಗೆ ಸರ್ಕಾರದ ಪೂರ್ವಾನುಮೋದನೆಯ ಅಗತ್ಯವಿರುತ್ತದೆ. |
| ಆ) | ಸದರಿ ಪಿಟಿಸಿಎಲ್ ಕಾಯ್ದೆ ವ್ಯಾಪ್ತಿಗೆ ಒಳಪಡುವ ಜಮೀನುಗಳನ್ನು ವಾಸ್ತವ್ಯ ಉದ್ದೇಶಕ್ಕೆ ಭೂ ಪರಿವರ್ತನೆ ಮಾಡುವಲ್ಲಿ ಸರ್ಕಾರದಿಂದ ಕಡ್ಡಾಯವಾಗಿ ಪೂರ್ವಾನುಮತಿ ಪಡೆಯುವ ಸುತ್ತೋಲೆಯಿಂದಾಗಿ ಕಡತ ವಿಲೇವಾರಿ ವಿಳಂಬವಾಗಿ ಸಂಕಷ್ಟಕ್ಕೆ ಒಳಗಾಗಿರುವುದನ್ನು ಸರ್ಕಾರ ಗಮನಿಸಿದೆಯೇ; | |
| ಇ) | ಸದರಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಪಿಟಿಸಿಎಲ್ ಕಾಯ್ದೆ ವ್ಯಾಪ್ತಿಗೆ ಒಳಪಡುವ ಜಮೀನುಗಳನ್ನು ವಾಸ್ತವ್ಯ ಉದ್ದೇಶಗಳಿಗೆ ಭೂ-ಪರಿವರ್ತನೆಯನ್ನು ಜಿಲ್ಲಾಧಿಕಾರಿ ಹಾಗೂ ತಹಶೀಲ್ದಾರ್ ಹಂತದಲ್ಲಿ ವಿಲೇವಾರಿಗೊಳಿಸಲು ಅನುಮತಿ ನೀಡುವಲ್ಲಿ ಸರ್ಕಾರದ ನಿಲುವೇನು? | |

ಸಂಖ್ಯೆ: ಆರ್‌ಡಿ 16 ಎಲ್‌ಜಿಕ್ಯೂ 2022

(ಆರ್. ಅಶೋಕ)
ಕಂದಾಯ ಸಚಿವರು

# ಕರ್ನಾಟಕ ವಿಧಾನ ಸಭೆ

(15ನೇ ವಿಧಾನಸಭೆ 12ನೇ ಅಧಿವೇಶನ)

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ .ಕೆ<br>(ಉಡುಪಿ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 260 |
| ಉತ್ತರಿಸಬೇಕಾದ ಸಚಿವರು | : | ಕೃಷಿ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 16-02-2022 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯ ಬ್ರಹ್ಮಾವರದಲ್ಲಿ ಕೃಷಿ ವಿದ್ಯಾಲಯ ಆರಂಭಿಸುವ ಯೋಜನೆ ಪ್ರಸ್ತುತ ಯಾವ ಹಂತದಲ್ಲಿದೆ; ಯಾವ ಶೈಕ್ಷಣಿಕ ಸಾಲಿನಲ್ಲಿ ಕೃಷಿ ಕಾಲೇಜು ಆರಂಭಿಸಲು ಯೋಜಿಸಲಾಗಿದೆ; | ರಾಜ್ಯದಲ್ಲಿರುವ ಕೃಷಿ ವಿಶ್ವವಿದ್ಯಾಲಯಗಳ ಬಲವರ್ಧನೆ/ ಹೊಸ ಕೃಷಿ ಕಾಲೇಜುಗಳ ಸ್ಥಾಪನೆ ಮತ್ತು ಅವುಗಳ ಇನ್ನಿತರ ಅಭಿವೃದ್ಧಿಗೆ ಅಗತ್ಯವಿರುವ ಅಂಶಗಳನ್ನು ಪರಿಶೀಲಿಸಲು ಸರ್ಕಾರವು, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಪರಿಣಿತ ಸಮಿತಿಯನ್ನು (Expert Committee) ರಚಿಸಲಾಗಿರುತ್ತದೆ. ರಾಜ್ಯದ ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯಗಳಲ್ಲಿ ಹೊಸ ಕೃಷಿ ಕಾಲೇಜುಗಳನ್ನು ಸ್ಥಾಪಿಸುವಂತಹ ಪ್ರಸ್ತಾವನೆಗಳನ್ನು ಈ ಸಮಿತಿಯ ಮುಂದೆ ಮಂಡಿಸಲಾಗುವುದು.<br><br>ಈ ಪರಿಣಿತ ಸಮಿತಿಯು ಇದುವರೆವಿಗೂ ಐದು ಸಭೆಗಳನ್ನು ನಡೆಸಿದ್ದು, ದಿನಾಂಕ:18.12.2019 ರಲ್ಲಿ ಜರುಗಿದ ಸಭೆಯಲ್ಲಿ ನೂತನ ಕೃಷಿ ಕಾಲೇಜುಗಳನ್ನು ಪ್ರಾರಂಭಿಸುವ ಮುಂಚೆ ಈಗಿರುವ ಕೃಷಿ ಕಾಲೇಜುಗಳ ಬಲವರ್ಧನೆಗೆ ಇರುವಂತಹ ಕೊರತೆಗಳನ್ನು ಗಮನಿಸಿ, (1) ಮೂಲಭೂತ ಸೌಕರ್ಯಗಳು; (2) ಬೋಧಕ ಸಿಬ್ಬಂದಿಯ ಪ್ರಮಾಣ; (3) ಈಗಿರುವ ಕೃಷಿ ಪದವೀಧರರ ಲಭ್ಯತೆ ಮತ್ತು ಬೇಡಿಕೆ-ಇವುಗಳನ್ನು ಪರಿಶೀಲಿಸಿ, ಇವುಗಳ ಸಮತೋಲನದ ನಂತರ ಮುಂಬರುವ ಪ್ರಸ್ತಾವನೆಗಳನ್ನು ಕೈಗೊಳ್ಳಬಹುದಾಗಿದೆ ಎಂದು ಪರಿಣಿತ ಸಭೆಯು ನಡವಳಿಯಾಗಿರುತ್ತದೆ.<br><br>ಅದರಂತೆ, ಉಡುಪಿ ಜಿಲ್ಲೆಯ ಬ್ರಹ್ಮಾವರ ತಾಲ್ಲೂಕಿನ ಕೃಷಿ ಕಾಲೇಜು ಪ್ರಾರಂಭಿಸುವ ಕುರಿತ ಪ್ರಸ್ತಾವನೆಯನ್ನು ಈ ಸಮಿತಿಯ ಮುಂದೆ ಮಂಡಿಸಬೇಕಾಗಿದ್ದು, ಪ್ರಸ್ತುತ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು, ಕರ್ನಾಟಕ ಸರ್ಕಾರ ಇವರ ಅಧ್ಯಕ್ಷತೆಯಲ್ಲಿ ಪರಿಣಿತ ಸಮಿತಿಯನ್ನು (Expert Committee) ಆಯೋಜಿಸಲು ದಿನಾಂಕವನ್ನು ನಿಗಧಿಪಡಿಸಲು ಪರಿಶೀಲಿಸಲಾಗುತ್ತಿದ್ದು, ಸಮಿತಿಯ ಶಿಫಾರಸ್ಸಿನನ್ವಯ ಮುಂದಿನ ಕ್ರಮ ಕೈಗೊಳ್ಳಲಾಗುತ್ತದೆ. |

.....2

| ಆ) | ಈ ಕೃಷಿ ವಿದ್ಯಾಲಯದಲ್ಲಿ ಅಳವಡಿಸಿರುವ ಕಾರ್ಯಕ್ರಮಗಳೇನು? | ಉಡುಪಿ ಜಿಲ್ಲೆಯ ಬ್ರಹ್ಮಾವರದಲ್ಲಿ ಕೃಷಿ ವಿದ್ಯಾಲಯ ಆರಂಭಿಸಿದ್ದಲ್ಲಿ ಕೃಷಿ ವಿಜ್ಞಾನದಲ್ಲಿ ಪದವಿ ತರಗತಿಗಳನ್ನು ಪ್ರಾರಂಭಿಸಲು ಅವಶ್ಯವಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳೊಂದಿಗೆ ಈ ಕೆಳಕಂಡ ಕಾರ್ಯಕ್ರಮಗಳನ್ನು ಅಳವಡಿಸಲು ಉದ್ದೇಶಿಸಲಾಗಿರುತ್ತದೆ;<br><br>• ವಿದ್ಯಾರ್ಥಿಗಳ ವ್ಯಾಸಂಗಕ್ಕಾಗಿ ಕಟ್ಟಡ, 6 ತರಗತಿ ಕೋಣೆಗಳು, 12 ಪ್ರಯೋಗ ಶಾಲೆಗಳು, ಪರೀಕ್ಷೆಗಳಿಗೆ ವಿಶಾಲವಾದ ಕೋಣೆ.<br><br>• 150 ವಿದ್ಯಾರ್ಥಿಗಳ ಆಸನ ವ್ಯವಸ್ಥೆಯುಳ್ಳ ಸೆಮಿನಾರ್ ಹಾಲ್, ವಸ್ತು ಪ್ರದರ್ಶನ ಕೋಣೆ, ಓದುವ ಕೊಠಡಿ, ಗಣಕಯಂತ್ರ ಕೊಠಡಿ, ಆಡಳಿತ ವಿಭಾಗ, ಪಠ್ಯ ವಿಭಾಗ, ಡೀನ್‌ರವರ ಕಛೇರಿ, ಮಹಾವಿದ್ಯಾಲಯದ ಶಿಕ್ಷಕ/ ಶಿಕ್ಷಕೇತರ ಸಿಬ್ಬಂದಿಗಳಿಗೆ ಆಸನಕ್ಕಾಗಿ ಸ್ಥಳಾವಕಾಶ, ಶೌಚಾಲಯಗಳು, ಉಗ್ರಾಣಗಳು, Placement cell ಹಾಗೂ ಆಂತರಿಕ/ಬಾಹ್ಯ ಪರೀಕ್ಷಾ ವಿಭಾಗಗಳಿಗಾಗಿ ಸ್ಥಳಾವಕಾಶ ಮಾಡಿಕೊಳ್ಳುವುದು.<br><br>• ವಿದ್ಯಾರ್ಥಿ / ವಿದ್ಯಾರ್ಥಿನಿಯರ ವಸತಿ ನಿಲಯಗಳು.<br><br>• ಗ್ರಂಥಾಲಯ ಕಟ್ಟಡ, ಸಭಾಂಗಣ ಕಟ್ಟಡ, ಆಟದ ಮೈದಾನ ಅಭಿವೃದ್ಧಿ, ಅತಿಥಿ ಗೃಹದ ಕಟ್ಟಡ, ಸಿಬ್ಬಂದಿ ವಸತಿ ಗೃಹಗಳು.<br><br>• ಮಹಾವಿದ್ಯಾಲಯಕ್ಕೆ ಒದಗಿಸಲಾಗುವ ಒಟ್ಟಾರೆ ಕ್ಷೇತ್ರದ ಅಭಿವೃದ್ಧಿಗಾಗಿ ಒಂದು ಸುಸಜ್ಜಿತವಾದ ಸಂಶೋಧನಾ ಕೇಂದ್ರ.<br>• ಆವರಣ ಗೋಡೆ, ರಸ್ತೆಗಳ ಜಾಲ, ನೀರಾವರಿ ಹಾಗೂ ಕುಡಿಯುವ ನೀರಿನ ಪೈಪ್‌ಲೈನ್ ಜಾಲ, ಜಮೀನುಗಳ ನಿರ್ವಹಣೆ. |
|---|---|---|

ಇ-ಸಂಖ್ಯೆ: AGRI-AUS/3/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 261
ಉತ್ತರಿಸಬೇಕಾದ ದಿನಾಂಕ : 16.02.2022
ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| 01 | ಉಡುಪಿ ಜಿಲ್ಲೆಯಲ್ಲಿ ಬ್ಯಾಡ್ಮಿಂಟನ್ ಕ್ರೀಡೆಗೆ ಎಲ್ಲಾ ಸೌಲಭ್ಯಗಳಿದ್ದರು ಬ್ಯಾಡ್ಮಿಂಟನ್ ಅಕಾಡಮಿ ಇಲ್ಲದೆ ಬ್ಯಾಡ್ಮಿಂಟನ್ ಕ್ರೀಡೆ ಉತ್ತೇಜಿಸುವಲ್ಲಿ ತೊಡಕುಂಟಾಗುತ್ತಿರುವುದರಿಂದ ಸರ್ಕಾರದ ಸಹಭಾಗಿತ್ವದಲ್ಲಿ ಅಕಾಡಮಿ ಸ್ಥಾಪಿಸುವಲ್ಲಿ ಸರ್ಕಾರದ ನಿಲುವೇನು; | ಉಡುಪಿ ಜಿಲ್ಲೆಯಲ್ಲಿ ಬ್ಯಾಡ್ಮಿಂಟನ್ ಕ್ರೀಡೆಗೆ ಸಂಬಂಧಪಟ್ಟಂತೆ ಸರ್ಕಾರದ ಸಹಭಾಗಿತ್ವದಲ್ಲಿ ಬ್ಯಾಡ್ಮಿಂಟನ್ ಅಕಾಡೆಮಿ ಸ್ಥಾಪಿಸುವ ಸಂಬಂಧ ಸಾಧಕ-ಭಾದಕಗಳ ಕುರಿತು ನಿಯಮಾನುಸಾರ ಪರಿಶೀಲಿಸಲಾಗುವುದು. |
| 02 | ಕ್ರೀಡಾ ಕ್ಷೇತ್ರದಲ್ಲಿ ವಿವಿಧ ಕ್ರೀಡೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಅಕಾಡಮಿಗಳು ಮಹತ್ವದ ಪಾತ್ರ ವಹಿಸುವುದರಿಂದ ಸರ್ಕಾರದ ಸಹಭಾಗಿತ್ವದೊಂದಿಗೆ ಎಲ್ಲಾ ಕ್ರೀಡೆಗಳಿಗೂ ಅಕಾಡಮಿಯನ್ನು ಸ್ಥಾಪಿಸುವಲ್ಲಿ ಯಾವ ಕ್ರಮ ಕೈಗೊಳ್ಳಲಾಗುವುದು ? | ಮಾನ್ಯತೆ ಪಡೆದ ರಾಜ್ಯ ಕ್ರೀಡಾ ಸಂಸ್ಥೆಯಾದ ಕರ್ನಾಟಕ ಬಾಸ್ಕೆಟ್‌ಬಾಲ್ ಸಂಸ್ಥೆಯ ಸಹಭಾಗಿತ್ವದೊಂದಿಗೆ ಈಗಾಗಲೇ ಬಾಸ್ಕೆಟ್‌ಬಾಲ್ ಅಕಾಡೆಮಿಯನ್ನು ಬೆಂಗಳೂರು ವಿದ್ಯಾನಗರ ತರಬೇತಿ ಕೇಂದ್ರದಲ್ಲಿ ಸ್ಥಾಪಿಸಲಾಗಿದೆ. ಮುಂದಿನ ದಿನಗಳಲ್ಲಿ ಇನ್ನಿತರೆ ಕ್ರೀಡೆಗಳಿಗೆ ಸಂಬಂಧಪಟ್ಟಂತೆ ಮಾನ್ಯತೆ ಪಡೆದ ರಾಜ್ಯ ಕ್ರೀಡಾ ಸಂಸ್ಥೆಗಳ ಸಹಭಾಗಿತ್ವದೊಂದಿಗೆ ಅಕಾಡೆಮಿಯನ್ನು ಸ್ಥಾಪಿಸುವ ಕುರಿತು ಪರಿಶೀಲಿಸಲಾಗುವುದು. |

**ವೈಎಸ್ ಡಿ-ಇಬಿಬಿ / 8 / 2022**

**(ಡಾ|| ನಾರಾಯಣ ಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 262
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 16.02.2022

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಳಗಾವಿ ವಿಭಾಗದ ಬೈಲಹೊಂಗಲ ಘಟಕದಿಂದ ಪ್ರಾರಂಭದಿಂದಲೂ ಹುಬ್ಬಳ್ಳಿ ಮಾರ್ಗವಾಗಿ ಬೈಲಹೊಂಗಲ-ಹುಬ್ಬಳ್ಳಿ, ಬೈಲಹೊಂಗಲ-ದಾವಣಗೆರೆ-ಬೈಲಹೊಂಗಲ-ಬೆಂಗಳೂರಿಗೆ ವಾಹನಗಳು ಕಾರ್ಯಾಚರಣೆ ಮಾಡುತ್ತಿದ್ದದ್ದು ನಿಜವಲ್ಲವೇ; | ವಾ.ಕ.ರ.ಸಾ.ಸಂಸ್ಥೆಯಿಂದ -<br>• ಬೈಲಹೊಂಗಲ-ಹುಬ್ಬಳ್ಳಿ ಮಾರ್ಗದಲ್ಲಿ ಮೊದಲಿನಿಂದಲೂ ಯಾವುದೇ ಸಾರಿಗೆ ಕಾರ್ಯಾಚರಣೆ ಇರುವುದಿಲ್ಲ.<br>• ಬೈಲಹೊಂಗಲ-ದಾವಣಗೆರೆ ಸಾರಿಗೆಯನ್ನು ಕಡಿಮೆ ಜನದಟ್ಟಣೆಯಿಂದಾಗಿ 2010ನೇ ಸಾಲಿನಲ್ಲಿ ಸ್ಥಗಿತಗೊಳಿಸಿದೆ.<br>• ಬೈಲಹೊಂಗಲ-ಧರ್ಮಸ್ಥಳ ವಯಾ ಹುಬ್ಬಳ್ಳಿ 02 ಅನುಸೂಚಿಗಳನ್ನು ಪ್ರಸ್ತುತ ಕಾರ್ಯಾಚರಿಸಲಾಗುತ್ತಿದೆ.<br>• ಬೈಲಹೊಂಗಲ-ಬೆಂಗಳೂರು ವಯಾ ಹುಬ್ಬಳ್ಳಿ, ದಾವಣಗೆರೆ 04 ಅನುಸೂಚಿಗಳನ್ನು ಕಾರ್ಯಾಚರಿಸಲಾಗುತ್ತಿತ್ತು. ಆದರೆ, ವಿರಳ ಜನಸಂದಣಿ ಹಾಗೂ ಕಡಿಮೆ ಆದಾಯ ಸಂಗ್ರಹವಾದ್ದರಿಂದ, ಅಕ್ಟೋಬರ್-2019 ರಿಂದ 02 ಅನುಸೂಚಿಗಳನ್ನು ಕಾರ್ಯಾಚರಿಸಲಾಗುತ್ತಿದೆ. |
| ಆ. | ಪ್ರಸ್ತುತ ಈ ಬಸ್ಸುಗಳ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿರುವುದು ನಿಜವೇ; | ಬೈಲಹೊಂಗಲ-ಬೆಂಗಳೂರು ಮಾರ್ಗದ 02 ಹಗಲು ಸಾರಿಗೆ ಅನುಸೂಚಿಗಳನ್ನು ಕಡಿಮೆ ಜನಸಂದಣಿ ಹಾಗೂ ಕಡಿಮೆ ಆದಾಯದ ಹಿನ್ನಲೆಯಲ್ಲಿ ಸ್ಥಗಿತಗೊಳಿಸಲಾಗಿದೆ. |
| ಇ. | ಈ ಮಾರ್ಗದ ವಾಹನಗಳು ಲಾಭದಾಯಕವಾಗಿರುವುದಲ್ಲದೇ ಪ್ರವಾಸಿಗರಿಗೂ ಸಹ ಅನುಕೂಲವಾಗಿದ್ದರೂ ಕೂಡ ಬಹಳ ವರ್ಷಗಳಿಂದ ಈ ಮಾರ್ಗದ ಬಸ್ಸುಗಳನ್ನು ಸ್ಥಗಿತಗೊಳಿಸಿರುವುದಕ್ಕೆ ಕಾರಣಗಳೇನು ನಿಜವೇ; | |
| ಈ. | ಈ ಭಾಗದ ಜನರು ಹೆಚ್ಚಾಗಿ ಹುಬ್ಬಳ್ಳಿಗೆ ವ್ಯಾಪಾರ ವಹಿವಾಟಿಗೆ, ವಿದ್ಯಾರ್ಥಿಗಳು ವಿದ್ಯಾರ್ಜನೆಗೆ ಹೋಗುತ್ತಿರುವುದರಿಂದ ಅವರಿಗೆ ತೊಂದರೆಯಾಗುತ್ತಿರುವ ಸಂಗತಿ ಸರ್ಕಾರದ ಗಮನಕ್ಕೆ ಬಂದಿದೆಯೇ; | ಈ ಬಗ್ಗೆ ಅಹವಾಲುಗಳು ಸ್ವೀಕೃತವಾಗಿರುವುದಿಲ್ಲ. ಮುಂಬರುವ ದಿನಗಳಲ್ಲಿ ಸದರಿ ಮಾರ್ಗಗಳಲ್ಲಿ ಹೆಚ್ಚಿನ ಬೇಡಿಕೆ ಬಂದಲ್ಲಿ ಕಾರ್ಯಾಚರಿಸಲು ಪರಿಶೀಲಿಸಲಾಗುವುದು. |
| ಉ. | ಹಾಗಿದ್ದಲ್ಲಿ, ಕೂಡಲೇ ಈ ಮಾರ್ಗದಲ್ಲಿ ಬಸ್‌ಗಳನ್ನು ಓಡಿಸಲು ಕ್ರಮ ಕೈಗೊಳ್ಳಲಾಗುವುದೇ? | |

**ಸಂಖ್ಯೆ: ಟಿಡಿ 06 ಟಿಸಿಕ್ಯೂ 2022**

**(ಬಿ.ಶ್ರೀರಾಮುಲು)**
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 263

ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 16.02.2022

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೈಲಹೊಂಗಲ ಘಟಕದಿಂದ ವಾಯಾ ಯಲ್ಲಮ್ಮನಗುಡ್ಡ ಬದಾಮಿ-ಬನಶಂಕರಿ ಮಾರ್ಗವಾಗಿ ಶಿವಯೋಗಮಂದಿರಕ್ಕೆ ಕಾರ್ಯಾಚರಣೆ ಮಾಡಲಾಗುತ್ತಿದ್ದ ಬಸ್ಸನ್ನು ಸ್ಥಗಿತಗೊಳಿಸಿರುವುದು ನಿಜವೇ; | ಬೈಲಹೊಂಗಲ ಘಟಕದಿಂದ ವಾಯಾ ಯಲ್ಲಮ್ಮನಗುಡ್ಡ ಬದಾಮಿ-ಬನಶಂಕರಿ ಮಾರ್ಗವಾಗಿ ಶಿವಯೋಗಮಂದಿರಕ್ಕೆ 2009ನೇ ಸಾಲಿನಲ್ಲಿ 3 ತಿಂಗಳು ಬಸ್ಸನ್ನು ಕಾರ್ಯಾಚರಿಸಲಾಗುತ್ತಿತ್ತು. ಕಡಿಮೆ ಆದಾಯದ ಹಿನ್ನೆಲೆಯಲ್ಲಿ ರದ್ದುಪಡಿಸಿ ಪುನಃ 2014ನೇ ಸಾಲಿನಲ್ಲಿ 2 ತಿಂಗಳು ಕಾರ್ಯಾಚರಣೆ ಮಾಡಲಾಗಿತ್ತು. ಕಡಿಮೆ ಆದಾಯದ ಹಿನ್ನೆಲೆಯಲ್ಲಿ ಪುನಃ ರದ್ದುಪಡಿಸಲಾಗಿದೆ. |
| ಆ. | ಈ ಬಸ್ಸು ಕಾರ್ಯಾಚರಣೆ ಮಾಡುವುದನ್ನು ಸ್ಥಗಿತಗೊಳಿಸಿರುವುದರಿಂದ ಸಾರ್ವಜನಿಕರಿಗೆ ತುಂಬಾ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸಾರ್ವಜನಿಕರಿಗೆ ತೊಂದರೆಯಾಗಿರುವ ಬಗ್ಗೆ ಯಾವುದೇ ದೂರು/ ಅಹವಾಲುಗಳು ಸ್ವೀಕೃತವಾಗಿರುವುದಿಲ್ಲ. |
| ಇ. | ಹಾಗಿದ್ದಲ್ಲಿ, ಕೂಡಲೇ ಈ ಬಸ್ಸನ್ನು ಪ್ರಾರಂಭಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ? | |

ಸಂಖ್ಯೆ: ಟಿಡಿ 07 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 264

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)

ಉತ್ತರಿಸಬೇಕಾದ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 16.02.2022

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯಿಂದ ಯಾವ-ಯಾವ ಕೆಲಸಗಳನ್ನು ತೆಗೆದುಕೊಳ್ಳಲಾಗಿದೆ; | ಬೆಳಗಾವಿ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯಿಂದ ಕೈಗೊಂಡಿರುವ ಯೋಜನೆಗಳ/ ಕೆಲಸಗಳ ವಿವರವನ ಅನುಬಂಧ-1ರಲ್ಲಿ ಒದಗಿಸಿದೆ. |
| ಆ) | ಈ ಇಲಾಖೆಯಿಂದ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಿಂದ ಯಾವ-ಯಾವ ಕೆಲಸಗಳನ್ನು ಕೈಗೊಳ್ಳಲಾಗಿದೆ; (ವಿವರ ನೀಡುವುದು) | ತೋಟಗಾರಿಕೆ ಇಲಾಖೆಯಿಂದ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಿಂದ ಕೈಗೊಂಡಿರುವ ಯೋಜನೆಗಳ/ ಕೆಲಸಗಳ ವಿವರವನ್ನು ಅನುಬಂಧ-2ರಲ್ಲಿ ಒದಗಿಸಿದೆ |
| ಇ) | ಈ ಹಿಂದೆ ಬೈಲಹೊಂಗಲದಲ್ಲಿ ಹಣ್ಣಿನ ಗಿಡ, ತೆಂಗಿನ ಗಿಡಗಳನ್ನು, ಕಾಯಿಪಲ್ಲೆ ಬೀಜಗಳನ್ನು ವಿತರಣೆ ಮಾಡಲಾಗುತ್ತಿದ್ದು, ಪ್ರಸ್ತುತ ಅದನ್ನು ಸ್ಥಗಿತಗೊಳಿಸಿರುವುದು ನಿಜವೇ? | ಹಣ್ಣಿನ ಗಿಡ, ತೆಂಗಿನ ಗಿಡಗಳನ್ನು, ಕಾಯಿಪಲ್ಲೆ ಬೀಜಗಳನ್ನು ವಿತರಣೆ ಮಾಡಲಾಗುತ್ತಿದ್ದ ಕಾರ್ಯಕ್ರಮವು ಅನುಷ್ಠಾನದಲ್ಲಿರುವುದಿಲ್ಲ. |

**No. HORTI 55 HGM 2022**

(ಮುನಿರತ್ನ)
ತೋಟಗಾರಿಕೆ ಹಾಗೂ ಯೋಜನೆ
ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು

## ಅನುಬಂಧ-1

ತೋಟಗಾರಿಕೆ ಇಲಾಖೆ, ಬೆಳಗಾವಿಯಿಂದ 2021-22ನೇ ಸಾಲಿನಲ್ಲಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ

| ಕ್ರ. ಸಂ. | ಯೋಜನೆಯ ಹೆಸರು |
|---|---|
| 1 | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ |
| 2 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) |
| 3 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ. |
| 4 | ರಾಷ್ಟ್ರೀಯ ತೋಟಗಾರಿಕೆ ಮಿಷನ್ |
| 5 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ |
| 6 | SMAM ತೋಟಗಾರಿಕೆಯಲ್ಲಿ ಯಾಂತ್ರಿಕರಣ. |
| 7 | ಪರಂಪರಾಗತ ಕೃಷಿ ವಿಕಾಸ ಯೋಜನೆ (PKVY) |
| 8 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ |
| 9 | ಸಮಗ್ರ ತೋಟಗಾರಿಕಾ ಅಭಿವೃದ್ಧಿ |
| 10 | ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ |
| 11 | ಇಲಾಖಾ ಪ್ರಯೋಗಶಾಲೆಗಳ ಅಭಿವೃದ್ಧಿ |
| 12 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ |
| 13 | ತೂಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು |
| 14 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ |
| 15 | ತೋಟಗಾರಿಕೆ ಕಟ್ಟಡಗಳು |
| 16 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ |
| 17 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ |
| 18 | ಪ್ರಚಾರ ಮತ್ತು ಸಾಹಿತ್ಯ |
| 19 | ಜೇನು ಸಾಕಾಣಿಕೆ |

for ತೋಟಗಾರಿಕೆ [illegible]
ಲಾಲ್ ಬಾಗ್, ಬೆಂಗಳೂರು-4

## ಅನುಬಂಧ-2

**ತೋಟಗಾರಿಕೆ ಇಲಾಖೆಯಿಂದ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷಗಳಿಂದ ಕೈಗೊಂಡಿರುವ ಯೋಜನೆಗಳ/ ಕೆಲಸಗಳ ವಿವರ**

**ಆರ್ಥಿಕ ವರ್ಷ: 2018-19**

| ಕ್ರ.ಸಂ. | ಯೋಜನೆ ವಿವರ |
|---|---|
| 1 | ರಾಷ್ಟ್ರೀಯ ತೋಟಗಾರಿಕೆ ಮಿಷನ್ |
| 2 | ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆ |
| 3 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ |
| 4 | ಕೃಷಿ ಭಾಗ್ಯ ಯೋಜನೆ |
| 5 | ತೆಂಗಿನ ಬೆಳೆ ಸಂಯೋಜಿತ ಬೇಸಾಯ |
| 6 | ತೆಂಗಿನ ಬೆಳೆಯಲ್ಲಿ ಸಮಗ್ರ ಪೋಷಕಾಂಶ ನಿರ್ವಹಣೆ |
| 7 | ತೋಟಗಾರಿಕೆ ಬೆಳೆಯಲ್ಲಿ ಕೀಟ ಮತ್ತು ರೋಗ ನಿಯಂತ್ರಣ |
| 8 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ -ಯಾಂತ್ರೀಕರಣ |

**ಆರ್ಥಿಕ ವರ್ಷ:2019-20**

| ಕ್ರ.ಸಂ. | ಯೋಜನೆ ವಿವರ |
|---|---|
| 1 | ರಾಷ್ಟ್ರೀಯ ತೋಟಗಾರಿಕೆ ಮಿಷನ್ |
| 2 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ |
| 3 | ತೋಟಗಾರಿಕೆ ಬೆಳೆಯಲ್ಲಿ ಕೀಟ ಮತ್ತು ರೋಗ ನಿಯಂತ್ರಣ |
| 4 | ಕೇಂದ್ರ ಪುರಸ್ಕೃತ ಯೋಜನೆಯಾದ ಕೃಷಿ ವಿಸ್ತರಣೆ ಮತ್ತು ತರಬೇತಿ ಅಭಿಯಾನ ಯೋಜನೆ |
| 5 | ತಾಲೂಕಾ ಪಂಚಾಯತ ಯೋಜನೆ-ವಿಶೇಷ ಘಟಕ ಯೋಜನೆ |

**ಆರ್ಥಿಕ ವರ್ಷ:2020-21**

| ಕ್ರ.ಸಂ. | ಯೋಜನೆ ವಿವರ |
|---|---|
| 1 | ರಾಷ್ಟ್ರೀಯ ತೋಟಗಾರಿಕೆ ಮಿಷನ್ |
| 2 | ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆ |
| 3 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ |
| 4 | ಸಾಮಾರ್ಥ್ಯವುಳ್ಳ ರಾಜ್ಯಗಳಲ್ಲಿ ಎಣ್ಣೆ ತಾಳೆ ವ್ಯವಸಾಯ ಯೋಜನೆ |
| 5 | ತೋಟಗಾರಿಕೆ ಬೆಳೆಯಲ್ಲಿ ಕೀಟ ಮತ್ತು ರೋಗ ನಿಯಂತ್ರಣ |
| 6 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ -ಯಾಂತ್ರೀಕರಣ |

ತೋಟಗಾರಿಕೆ [illegible]
ಲಾಲ್ ಬಾಗ್, ಬೆಂಗಳೂರು-4.

ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 265 |
|---|---|---|
| ಸದಸ್ಯರ ಹೆಸರು | : | ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ |
| ಉತ್ತರಿಸುವ ದಿನಾಂಕ | : | 16.02.2022 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಮಡಿವಾಳ ಸಮಾಜದವರು ತಮ್ಮ ಸಮಾಜವನ್ನು ಪರಿಶಿಷ್ಟ ಜಾತಿಗೆ ಸೇರಿಸುವಂತೆ ಹಲವಾರು ವರ್ಷಗಳಿಂದ ಬೇಡಿಕೆಯನ್ನು ಇಟ್ಟಿರುವುದು ನಿಜವೇ; | ಹೌದು |
| ಆ) | ಮಡಿವಾಳ ಸಮಾಜವನ್ನು ಪರಿಶಿಷ್ಟ ಜಾತಿಗೆ ಸೇರಿಸಲು ಕುಲಶಾಸ್ತ್ರೀಯ ಅಧ್ಯಯನ ನಡೆಸಲು ಮೈಸೂರು ವಿಶ್ವವಿದ್ಯಾಲಯದ ಪ್ರೊ ಡಾ॥ ಅನ್ನಪೂರ್ಣಮ್ಮನವರನ್ನು ನೇಮಿಸಿದ ಸಂಗತಿ ನಿಜವೇ; | |
| ಇ) | ಡಾ॥ ಅನ್ನಪೂರ್ಣಮ್ಮನವರು ಸನ್ 2010 ರಲ್ಲಿಯೇ ಸರ್ಕಾರಕ್ಕೆ ವರದಿ ನೀಡಿದ ಸಂಗತಿ ನಿಜವೇ; ಈ ವರದಿಯಲ್ಲಿ ರಾಜ್ಯದಲ್ಲಿರುವ ಮಡಿವಾಳ ಸಮಾಜದವರು ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದಿರುವುದಾಗಿ ಹಾಗೂ ಈ ಸಮಾಜವನ್ನು ಪರಿಶಿಷ್ಟ ಜಾತಿಗೆ ಸೇರಿಸಲು ಸರ್ಕಾರಕ್ಕೆ ವರದಿ ಕೊಟ್ಟಿರುವುದು ನಿಜವೇ; | |
| ಈ) | ಹಾಗಿದ್ದಲ್ಲಿ, ಕೂಡಲೇ ಮಡಿವಾಳ ಸಮಾಜವನ್ನು ಪರಿಶಿಷ್ಟ ಜಾತಿಗೆ ಸೇರಿಸಲು ಕೇಂದ್ರ ಸರ್ಕಾರಕ್ಕೆ ರಾಜ್ಯ ಸರ್ಕಾರದಿಂದ ಪ್ರಸ್ತಾವನೆ ಸಲ್ಲಿಸಲಾಗುವುದೇ? | ಮಡಿವಾಳ ಜನಾಂಗವನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರ್ಪಡೆ ಮಾಡುವ ಸಂಬಂಧ ಡಾ॥ ಅನ್ನಪೂರ್ಣಮ್ಮನವರು ಕುಲಶಾಸ್ತ್ರೀಯ ಅಧ್ಯಯನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸುವ ಬಗ್ಗೆ ಕ್ರಮವಹಿಸಲಾಗುವುದು. |

ಸಕಇ 23 ಎಸ್‌ಎಡಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.

**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 266
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್
ಉತ್ತರಿಸುವ ದಿನಾಂಕ : 16-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ಮತಕ್ಷೇತ್ರದ ಬೈಲಹೊಂಗಲ ತಾಲ್ಲೂಕಿನ ದೇವಲಾಪೂರ ಮತ್ತು ಬೈಲವಾಡ ಗ್ರಾಮಗಳಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳು ಇರುವುದು ನಿಜವಲ್ಲವೇ? | ಹೌದು. |
| ಆ) | ಇಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಮೆಟ್ರಿಕ್ ನಂತರದ ವಸತಿ ನಿಲಯಗಳನ್ನು ಪ್ರಾರಂಭಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು ನಿಜವಲ್ಲವೇ; | ದೇವಲಾಪುರ ಮತ್ತು ಬೈಲವಾಡ ಗ್ರಾಮಗಳಲ್ಲಿ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಮಂಜೂರಾತಿ ಕೋರಿ ಯಾವುದೇ ಪ್ರಸ್ತಾವನೆಗಳು ಸ್ವೀಕೃತವಾಗಿರುವುದಿಲ್ಲ. |
| ಇ) | ಹಾಗದರೆ, ಈ ವರ್ಷದಿಂದ ಸದರಿ ಗ್ರಾಮಗಳಲ್ಲಿ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಮೆಟ್ರಿಕ್ ನಂತರದ ವಸತಿ ನಿಲಯಗಳನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದೇ? | ಜಿಲ್ಲೆಯಿಂದ ನಿಗಧಿತ ನಮೂನೆಯಲ್ಲಿ ಪ್ರಸ್ತಾವನೆ ಬಂದ ನಂತರ ಮುಂದಿನ ಕ್ರಮ ವಹಿಸಲಾಗುವುದು. |

ಸಕಇ 106 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭಾ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | 267 |
| **ಸದಸ್ಯರ ಹೆಸರು** | ಸುಬ್ಬರೆಡ್ಡಿ ಎಸ್.ಎನ್. (ಬಾಗೇಪಲ್ಲಿ) |
| **ಉತ್ತರಿಸಬೇಕಾದ ದಿನಾಂಕ** | 16.02.2022 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ಅಕ್ಟೋಬರ್ ಮತ್ತು ನವೆಂಬರ್ ತಿಂಗಳಿನಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಸುರಿದ ಅಕಾಲಿಕ ಭಾರಿ ಮಳೆಗೆ ಯಾವ ಯಾವ ಕೆರೆಗಳು ಮತ್ತು ಯಾವ ಯಾವ ರಸ್ತೆಗಳು ಹಾಳಾಗಿರುತ್ತವೆ; | ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ಅಕ್ಟೋಬರ್ ಮತ್ತು ನವೆಂಬರ್ ತಿಂಗಳಿನಲ್ಲಿ ಅಕಾಲಿಕ ಭಾರಿ ಮಳೆಗೆ ಹಾಳಾದ ರಸ್ತೆ ಮತ್ತು ಕೆರೆಗಳ ವಿವರಗಳನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಆ. | ಸದರಿ ಹಾಳಾದ ಕೆರೆಗಳು ಮತ್ತು ರಸ್ತೆಗಳ ಅಭಿವೃದ್ಧಿಗೆ / ದುರಸ್ತಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಚಿಕ್ಕಬಳ್ಳಾಪುರ ಜಿಲ್ಲೆ ವ್ಯಾಪ್ತಿಯಲ್ಲಿ ಸುರಿದ ಭಾರಿ ಮಳೆಯಿಂದ ಹಾನಿಗೊಳಗಾದ ರಸ್ತೆ ಮತ್ತು ಕೆರೆಗಳ ದುರಸ್ತಿಗೆ ಬೇಕಾಗುವ ಅನುದಾನದ ವಿವರಗಳನ್ನು ಒಳಗೊಂಡಂತೆ 2021-22ನೇ ಸಾಲಿನಲ್ಲಿ ಹಾನಿಗೊಳಗಾದ ರಸ್ತೆ/ಸೇತುವೆ/ಇತರೆ ಕಾಮಗಾರಿಗಳ ದುರಸ್ತಿಗೆ ಬೇಕಾಗಿರುವ ಅನುದಾನವನ್ನು ಒದಗಿಸುವಂತೆ ಕೋರಿ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಹಾಗೂ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. |
| ಇ | ಈ ರಸ್ತೆ ಮತ್ತು ಕೆರೆ ಗುಂಟೆಗಳನ್ನು ಅಭಿವೃದ್ಧಿಪಡಿಸಲು ಬೇಕಾಗಿರುವ ಮೊತ್ತವೆಷ್ಟು ಹಾಗೂ ಬಿಡುಗಡೆ ಮಾಡಲು ಸರ್ಕಾರ ಕೈಗೊಳ್ಳುವ ಕ್ರಮಗಳೇನು; (ವಿವರ ನೀಡುವುದು) | ಮಳೆಯಿಂದ ಹಾನಿಗೊಳಗಾದ ರಸ್ತೆ ಮತ್ತು ಕೆರೆ ಗುಂಟೆಗಳನ್ನು ಅಭಿವೃದ್ಧಿ ಪಡಿಸಲು ರೂ. 454.38 ಲಕ್ಷಗಳು ಬೇಕಾಗಿದ್ದು ಅನುದಾನವನ್ನು ಒದಗಿಸುವಂತೆ ಕೋರಿ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಹಾಗೂ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ<br><br>ಆರ್ಥಿಕ ಇಲಾಖೆಯು ಒದಗಿಸುವ ಅನುದಾನದಲ್ಲಿ ಅಗತ್ಯವಿರುವ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮವಹಿಸಬೇಕಿದೆ. |
| ಈ | ಈ ಕೆರೆಗಳು ಮತ್ತು ರಸ್ತೆಗಳನ್ನು ಶೀಘ್ರವಾಗಿ ದುರಸ್ತಿ ಮಾಡಬೇಕಾಗಿದ್ದರೂ ಇದುವರೆಗೂ ಅನುದಾನ ಬಿಡುಗಡೆ ಮಾಡದೇ ಇರಲು ಕಾರಣವೇನು; ದುರಸ್ತಿ ಮಾಡದಿರುವುದರಿಂದ ಸಾರ್ವಜನಿಕರಿಗೆ ತೊಂದರೆ ಉಂಟಾಗುತ್ತಿರುವುದು ನಿಜವೇ; | |
| ಉ | ಸದರಿ ಕೆರೆಗಳ ಹಾಗೂ ರಸ್ತೆಗಳ ದುರಸ್ತಿಗೆ ಯಾವ ಕಾಲಮಿತಿಯಲ್ಲಿ ಅನುದಾನ ಮಂಜೂರು ಮಾಡಲಾಗುವುದು? (ವಿವರ ನೀಡುವುದು) | |

ಸಂಖ್ಯೆ: ಗ್ರಾಅಪ:15ನೇವಿಸ:200/5:ಆರ್.ಆರ್.ಸಿ:2021

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

# ಅನುಬಂಧ-1

| ಕ್ರ.ಸಂ | ತಾಲ್ಲೂಕು | ಯೋಜನೆ | ಕಾಮಗಾರಿಯ ಹೆಸರು | ಅಭಿವೃದ್ಧಿ ಪಡಿಸಲು ಬೇಕಾಗಿರುವ ಅಂದಾಜು ಮೊತ್ತ ರೂ ಲಕ್ಷಗಳಲ್ಲಿ |
|---|---|---|---|---|
| 1 | ಶಿಡ್ಲಘಟ್ಟ | ಪಿ.ಎಂ.ಜಿ.ಎಸ್.ವೈ- 3 | ಗಂಜಿಗುಂಟೆ ಎಸ್.ಹೆಚ್ ಯಿಂದ ಪೂಲಕುಂಟಹಳ್ಳಿ (ಎಂ.ಡಿ.ಆರ್) ವಯಾ ದೊಡ್ಡ ಬಂದರಘಟ್ಟ, ಚಿಕ್ಕ ಬಂದರಘಟ್ಟ, ಹಕ್ಕಿ ಪಿಕ್ಕಿ ಕಾಲೋನಿ ರಸ್ತೆ ಅಭಿವೃದ್ದಿ ಕಾಮಗಾರಿ | 158.00 |
| 2 | ಬಾಗೇಪಲ್ಲಿ | ಪಿ.ಎಂ.ಜಿ.ಎಸ್.ವೈ- 3 | ಮಡಕವಾರಿಪಲ್ಲಿ ಯಿಂದ ಬಿಲ್ಲೂರು ರಸ್ತೆ ಅಭಿವೃದ್ದಿ ಕಾಮಗಾರಿ | 75.00 |
| 3 | ಶಿಡ್ಲಘಟ್ಟ | ಎನ್.ಜಿ.ಎನ್.ಆರ್.ವೈ –3 | ಗೋಣಿಮರದಹಳ್ಳಿ ಯಿಂದ ಎಸ್.ಹೆಚ್ ರಸ್ತೆ ಅಭಿವೃದ್ಧಿ ಕಾಮಗಾರಿ | 7.00 |
| 4 | ಶಿಡ್ಲಘಟ್ಟ | ಎನ್.ಜಿ.ಎನ್.ಆರ್.ವೈ –4 | ಕ್ಯಾಸಗೆರೆ ವೇಮಗಲ್ ರಸ್ತೆಯಿಂದ ಚಿಂತಾಮಣಿ ರಸ್ತೆ ಅಭಿವೃದ್ಧಿ ಕಾಮಗಾರಿ | 20.00 |
| | | | ಒಟ್ಟು | **260.00** |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 268
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್
ಉತ್ತರಿಸುವ ದಿನಾಂಕ : 16.02.2022.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>2016-17 ಮತ್ತು 2017-18ನೇ ಸಾಲಿನಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ಮತಕ್ಷೇತ್ರಕ್ಕೆ ಗಂಗಾಕಲ್ಯಾಣ ಯೋಜನೆಯಡಿ ಒಟ್ಟು ಎಷ್ಟು ಕೊಳವೆ ಬಾವಿಗಳನ್ನು ಮಂಜೂರು ಮಾಡಲಾಗಿದೆ; ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮ, ತಾಂಡ ಅಭಿವೃದ್ಧಿ ನಿಗಮ, ಭೋವಿ ಅಭಿವೃದ್ಧಿ ನಿಗಮ, ಆದಿಜಾಂಭವ ಅಭಿವೃದ್ಧಿ ನಿಗಮಗಳ ಎಷ್ಟು ಫಲಾನುಭವಿಗಳಿಗೆ ಕೊಳವೆ ಬಾವಿ ಕೊರೆಯಲಾಗಿದೆ; ಇನ್ನು ಎಷ್ಟು ಫಲಾನುಭವಿಗಳಿಗೆ ಕೊಳವೆ ಬಾವಿ ಕೊರೆಯಬೇಕಾಗಿದೆ; (ವಿವರ ನೀಡುವುದು)</td><td>ಡಾ:ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ 2016-17 ಮತ್ತು 2017-18ನೇ ಸಾಲಿಗೆ ನಿಗದಿಪಡಿಸಿದ ಗುರಿ, ಸಾಧನೆ ಮತ್ತು ಬಾಕಿ ಇರುವ ವಿವರಗಳನ್ನು ಈ ಕೆಳಕಂಡಂತೆ ನೀಡಿದೆ.
<table>
<tr><th>ವರ್ಷ</th><th>ನಿಗಮ</th><th>ಗುರಿ</th><th>ಸಾಧನೆ</th><th>ಬಾಕಿ</th></tr>
<tr><td rowspan="4">2016-17</td><td>ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿ.,</td><td rowspan="4">38</td><td rowspan="4">27</td><td rowspan="4">11</td></tr>
<tr><td>ಕರ್ನಾಟಕ ಆದಿಜಾಂಭವ ಅಭಿವೃದ್ಧಿ ನಿ.,</td></tr>
<tr><td>ಕರ್ನಾಟಕ ತಾಂಡ ಅಭಿವೃದ್ಧಿ ನಿ.,</td></tr>
<tr><td>ಕರ್ನಾಟಕ ಭೋವಿ ಅಭಿವೃದ್ಧಿ ನಿ.,</td></tr>
<tr><td rowspan="4">2017-18</td><td>ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿ.,</td><td rowspan="3">40</td><td rowspan="3">21</td><td rowspan="3">19</td></tr>
<tr><td>ಕರ್ನಾಟಕ ಆದಿಜಾಂಭವ ಅಭಿವೃದ್ಧಿ ನಿ.,</td></tr>
<tr><td>ಕರ್ನಾಟಕ ತಾಂಡ ಅಭಿವೃದ್ಧಿ ನಿ.,</td></tr>
<tr><td>ಕರ್ನಾಟಕ ಭೋವಿ ಅಭಿವೃದ್ಧಿ ನಿ.,</td><td>06</td><td>02</td><td>04</td></tr>
<tr><td></td><td>ಒಟ್ಟು</td><td>84</td><td>50</td><td>34</td></tr>
</table>
</td></tr>
<tr><td>ಆ)</td><td>ಕೊಳವೆಬಾವಿ ಕೊರೆಯುವ ಗುತ್ತಿಗೆದಾರರು 4 ವರ್ಷಗಳು ಕಳೆದರೂ ಕೊಳವೆಬಾವಿ ಕೊರೆಯದೆ ಬಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಅನ್ಯಾಯ ಮಾಡುತ್ತಿದ್ದರೂ ಅಧಿಕಾರಿಗಳು ಗುತ್ತಿಗೆದಾರರ ವಿರುದ್ಧ ಕ್ರಮ ಕೈಗೊಳ್ಳದೇ ಇರಲು ಕಾರಣಗಳೇನು;</td><td>2016-17 ಮತ್ತು 2017-18 ನೇ ಸಾಲಿಗೆ ಸಂಬಂಧಿಸಿದಂತೆ ದಿನಾಂಕ:15.05.2020ರಂದು ಆಯ್ಕೆ ಸಮಿತಿಯ ಮೂಲಕ ಮರು ಆಯ್ಕೆ ಪಟ್ಟಿಯನ್ನು ಮಾಡಲಾಗಿರುತ್ತದೆ.<br><br>2016-17ನೇ ಸಾಲಿನ 38 ಗುರಿಯಲ್ಲಿ 35 ಫಲಾಪೇಕ್ಷಿಗಳನ್ನು ಆಯ್ಕೆ ಮಾಡಲಾಗಿದ್ದು ಈ ಪೈಕಿ 27 ಕೊಳವೆಬಾವಿ ಕೊರೆಯಲಾಗಿದ್ದು ಬಾಕಿ 08 ಫಲಾಪೇಕ್ಷಿಗಳು ಅರ್ಹರಿರುವುದಿಲ್ಲ. 03 ಫಲಾಪೇಕ್ಷಿಗಳ ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಸಮಿತಿಯು ನೀಡಿರುವುದಿಲ್ಲ,<br><br>2017-18 ನೇ ಸಾಲಿನ 40 ಗುರಿಯಲ್ಲಿ 34 ಫಲಾಪೇಕ್ಷಿಗಳನ್ನು ಆಯ್ಕೆ ಮಾಡಲಾಗಿದ್ದು ಈ ಪೈಕಿ 21 ಕೊಳವೆಬಾವಿ ಕೊರೆಯಲಾಗಿದ್ದು 02 ಕೊಳವೆಬಾವಿಗಳಿಗೆ ಕಾರ್ಯಾದೇಶ ನೀಡಲಾಗಿರುತ್ತದೆ. ಬಾಕಿ 11 ಫಲಾಪೇಕ್ಷಿಗಳು ಅರ್ಹರಿರುವುದಿಲ್ಲ. 06 ಫಲಾಪೇಕ್ಷಿಗಳ ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಸಮಿತಿಯು ನೀಡಿರುವುದಿಲ್ಲ.</td></tr>
</table>

| | | |
|---|---|---|
| | | 2016-17 ಮತ್ತು 2017-18ನೇ ಸಾಲಿಗೆ ಬಾಗೇಪಲ್ಲಿ ವಿಧಾನ ಸಭಾಕ್ಷೇತ್ರಕ್ಕೆ ಎಲ್-1 ಬಿಡ್ಡುದಾರರಾಗಿ ಆಯ್ಕೆಯಾದ ಎಲ್-1 ಗುತ್ತಿಗೆದಾರರಿಗೆ ಕೊಳವೆಬಾವಿ ಕೊರೆಯುವಂತೆ ನೋಟೀಸ್‌ಗಳನ್ನು ಜಾರಿ ಮಾಡಲಾಗಿರುತ್ತದೆ. ಅರ್ಹ ಫಲಾಪೇಕ್ಷಿಗಳ ಆಯ್ಕೆ ಪಟ್ಟಿಯನ್ನು ಸಂಬಂಧಿಸಿದ ಸಮಿತಿಯು ನೀಡಿದ ತಕ್ಷಣ ಬಾಕಿ ಇರುವ ಎಲ್ಲಾ ಕೊಳವೆಬಾವಿಗಳನ್ನು ಕೊರೆದು ಪ್ರಗತಿ ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |
| ಇ) | ಈ ಗುತ್ತಿಗೆದಾರರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಅನ್ಯಾಯ ಮಾಡುವ ಉದ್ದೇಶದಿಂದ ಕೊಳವೆಬಾವಿ ಕೊರೆಯದೇ ನಿರಾಸಕ್ತಿಯಾಗಿರುವುದು ಹಾಗೂ ರೈತರುಗಳು ಕೊಳವೆಬಾವಿ ಕೊರೆಯುವಂತೆ ಮನವಿ ಮಾಡಲು ಕರೆ ಮಾಡಿದರೆ ಕರೆ ಸ್ವೀಕರಿಸದೇ ಇರುವ ಕಾರಣ ಸದರಿ ಗುತ್ತಿಗೆದಾರರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗುವುದು; (ವಿವರ ನೀಡುವುದು) | ಬಾಕಿ ಇರುವ ಅರ್ಹ ಫಲಾಪೇಕ್ಷಿಗಳಿಗೆ ಕೊಳವೆಬಾವಿ ಕೊರೆಯಲು ಗುತ್ತಿಗೆದಾರರಿಗೆ ದಿನಾಂಕ: 21.09.2021 ಮತ್ತು ದಿನಾಂಕ:06.01.2022ರಲ್ಲಿ ನೋಟಿಸ್ ಜಾರಿ ಮಾಡಲಾಗಿದೆ. ಅನರ್ಹಗೊಂಡ ಫಲಾಪೇಕ್ಷಿಗಳ ಬದಲಾಗಿ ಬೇರೆ ಫಲಾಪೇಕ್ಷಿಗಳನ್ನು ಆಯ್ಕೆ ಮಾಡಿಕೊಡಲು ಮಾನ್ಯ ಶಾಸಕರನ್ನು ಕೋರಿದ್ದು, ಆದಷ್ಟು ಬೇಗನೆ ಅರ್ಹ ಫಲಾಪೇಕ್ಷಿಗಳ ಪಟ್ಟಿ ಪಡೆದು ಪ್ರಗತಿ ಸಾಧಿಸಲು ಗುತ್ತಿಗೆದಾರರಿಗೆ ಸೂಚನೆ ನೀಡಲಾಗುವುದು. ಯಾವುದೇ ಫಲಾಪೇಕ್ಷಿಗಳ ದೂರವಾಣಿ ಬಂದರೆ ಅವುಗಳನ್ನು ಸ್ವೀಕರಿಸಿ ಅಗತ್ಯ ಮಾಹಿತಿ ನೀಡಲು ಸೂಚಿಸಲಾಗಿದೆ. |

ಸಂಖ್ಯೆ: ಸಕಇ 27 ಆರ್&ಐ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 269 |
| ಸದಸ್ಯರ ಹೆಸರು | : | ಶ್ರೀ ಸುಬ್ಬಾರೆಡ್ಡಿ ಎಸ್.ಎನ್. (ಬಾಗೇಪಲ್ಲಿ) |
| ಉತ್ತರಿಸುವ ದಿನಾಂಕ | : | 16-02-2022. |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬಾಗೇಪಲ್ಲಿ ಮತಕ್ಷೇತ್ರದಲ್ಲಿ ಅಕ್ರಮ ಬಡಾವಣೆಗಳ ಖಾತೆಗಳನ್ನು ಮಾಡಿರುವ ಅಧಿಕಾರಿಗಳನ್ನು ಅಮಾನತ್ತು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಅಕ್ರಮ ಖಾತೆಗಳನ್ನು ಬೇರೆ ಬೇರೆ ಗ್ರಾಮ ಪಂಚಾಯಿತಿಗಳಲ್ಲಿ ಮಾಡಿರುವ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವಲ್ಲಿ ಸರ್ಕಾರದ ನಿಲುವೇನು; | ಬಾಗೇಪಲ್ಲಿ ತಾಲ್ಲೂಕು, ಘಂಟಂವಾರಿಪಲ್ಲಿ ಮತ್ತು ಪರಗೋಡು ಗ್ರಾಮ ಪಂಚಾಯಿತಿಗಳಲ್ಲಿ ಈ ಸಂಬಂಧ ದೂರುಗಳು ಸ್ವೀಕೃತವಾಗಿದ್ದು, ಕ್ರಮ ವಹಿಸಲಾಗಿದೆ. |
| (ಇ) | ಸದರಿ ಈ ಬಡಾವಣೆಗಳ ನಿವೇಶನ ಖರೀದಿ ಮಾಡಿರುವವರಿಗೆ ಅನ್ಯಾಯ ಆಗುತ್ತಿದ್ದು, ಈ ಅಧಿಕಾರಿಗಳು ನಿರ್ಮಾಣ ಮಾಡಿದ ಮಾಲೀಕರು ಸಹ ಈ ಹಗರಣಗಳಲ್ಲಿ ಭಾಗವಹಿಸಿರುವುದು ನಿಜವೇ; | ಈ ಪ್ರಕರಣದಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ, ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಮತ್ತು ಕರ ವಸೂಲಿಗಾರರು ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಅವರ ವಿರುದ್ಧ ಕ್ರಮ ವಹಿಸಲಾಗಿದೆ. |
| (ಈ) | ಈ ಬಡಾವಣೆಗಳ ನಿವೇಶನ ಖರೀದಿ ಮಾಡಿರುವವರಿಗೆ ಅನ್ಯಾಯ ಆಗುತ್ತಿದ್ದು, ಈ ಬಡಾವಣೆಗಳನ್ನು ನಿರ್ಮಾಣ ಮಾಡಿರುವ ಮಾಲೀಕರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸಿ ನಿವೇಶನ ಖರೀದಿದಾರರಿಗೆ ಅವರ ಹಣ ಹಿಂದಿರುಗಿಸಲು ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಿದೆ? (ವಿವರ ನೀಡುವುದು) | ಅನ್ಯಾಯವಾಗಿರುವ ನಿವೇಶನದಾರರು ಮಾಲೀಕರ ವಿರುದ್ಧ ವೈಯಕ್ತಿಕವಾಗಿ ಕ್ರಿಮಿನಲ್ ಪ್ರಕರಣ ದಾಖಲಿಸಬೇಕಾಗಿರುತ್ತದೆ. |

ಸಂ. ಗ್ರಾಅಪ 19 ಗ್ರಾಪಂಅ 2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 270

ಸದಸ್ಯರ ಹೆಸರು : ಮಾನ್ಯ ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ)

ಉತ್ತರಿಸುವ ದಿನಾಂಕ : 16-02-2022

ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳಿಂದ ಬಾಗೇಪಲ್ಲಿ ವಿಧಾನಸಭಾ ಕ್ಷೇತ್ರದಲ್ಲಿ ಕೃಷಿ ವಿಮೆ ಯೋಜನೆಗೆ ನೋಂದಣಿ ಮಾಡಿಸಿರುವ ರೈತರ ಸಂಖ್ಯೆ ಎಷ್ಟು; (ಅವರುಗಳ ವಿವರ ನೀಡುವುದು)</td><td>ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆಯಡಿ ಬಾಗೇಪಲ್ಲಿ ವಿಧಾನ ಸಭಾ ಕ್ಷೇತ್ರದಿಂದ 2018-19, 2019-20 ಮತ್ತು 2020-21ನೇ ಸಾಲಿನಲ್ಲಿ ಕ್ರಮವಾಗಿ 8137, 4265 ಮತ್ತು 5774 ರೈತರು ಬೆಳೆ ವಿಮೆಗೆ ನೋಂದಾಯಿಸಿಕೊಂಡಿರುತ್ತಾರೆ. ರೈತರ ವಿವರಗಳನ್ನು ಅನುಬಂಧ-1 ರ (ಸಿ.ಡಿ.ಯಲ್ಲಿ ನೀಡಲಾಗಿದೆ).</td></tr>
<tr><td>ಆ)</td><td>ಈ ಪೈಕಿ ಎಷ್ಟು ರೈತರು ಪರಿಹಾರಕ್ಕೆ ಅರ್ಹರಾಗಿರುತ್ತಾರೆ ಹಾಗೂ ಪರಿಹಾರ ಪಡೆದು ಕೊಂಡವರುಗಳ ಸಂಖ್ಯೆ ಎಷ್ಟು; (ರೈತರ ವಿವರ ನೀಡುವುದು)</td><td>ಸದರಿ ಯೋಜನೆಯಡಿ ಕಳೆದ ಮೂರುವರ್ಷಗಳಲ್ಲಿ ಪರಿಹಾರ ಪಡೆಯಲು ಅರ್ಹರಾದ ರೈತರ ಸಂಖ್ಯೆ ಹಾಗೂ ಪರಿಹಾರ ಪಡೆದ ರೈತರ ವಿವರ ಈ ಕೆಳಕಂಡಂತೆ ಇರುತ್ತದೆ.
<table>
<tr><th>ವರ್ಷ</th><th>ಪರಿಹಾರ ಪಡೆಯಲು ಅರ್ಹ ರೈತರ ಸಂಖ್ಯೆ</th><th>ಪರಿಹಾರ ಪಡೆದ ರೈತರ ಸಂಖ್ಯೆ</th></tr>
<tr><td>2018-19</td><td>7465</td><td>7446</td></tr>
<tr><td>2019-20</td><td>624</td><td>605</td></tr>
<tr><td>2020-21</td><td>2100</td><td>2018</td></tr>
</table>
ಪರಿಹಾರ ಪಡೆದುಕೊಂಡ ರೈತರ ವಿವರಗಳನ್ನು ಅನುಬಂಧ-2 ರ (ಸಿ.ಡಿ.ಯಲ್ಲಿ ನೀಡಲಾಗಿದೆ).</td></tr>
<tr><td>ಇ)</td><td>ಬೆಳೆ ವಿಮೆ ಮಾಡಿಸಿರುವ ಕೆಲ ರೈತರಿಗೆ ಬೆಳೆ ಸಮೀಕ್ಷೆಯಲ್ಲಿ ಅಧಿಕಾರಿಗಳು ಮಾಡಿರುವ ತಪ್ಪಿಗೆ ರೈತರಿಗೆ ಅನ್ಯಾಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬೆಳೆ ವಿಮೆ ಮಾಡಿಸಿರುವ ಕೆಲ ರೈತರಿಗೆ ಬೆಳೆ ಸಮೀಕ್ಷೆಯಲ್ಲಿ ಅಧಿಕಾರಿಗಳು ಮಾಡಿರುವ ತಪ್ಪಿಗೆ ರೈತರಿಗೆ ಅನ್ಯಾಯವಾಗಿರುವ ಬಗ್ಗೆ ಯಾವುದೇ ವರದಿಯಾಗಿರುವುದಿಲ್ಲ.</td></tr>
</table>

| ಈ) | ಬಂದಿದ್ದರೆ, ಈ ತಪ್ಪುಗಳನ್ನು ಸರಿಪಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಅನ್ವಯಿಸುವುದಿಲ್ಲ. |
|---|---|---|

**ಸಂಖ್ಯೆ: ಕೃಇ/04/ಕೃಕೈಉ/2022**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 271 |
| ಮಾನ್ಯ ಸದಸ್ಯರ ಹೆಸರು | ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ) |
| ಉತ್ತರಿಸಬೇಕಾದ ದಿನಾಂಕ | 16.02.2022 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಮತ್ತು ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಫಲಾನುಭವಿಗಳು ಸಾಲ ಮಂಜೂರಾತಿಗೆ ಹೆಚ್ಚಿನ ಸಂಖ್ಯೆಯಲ್ಲಿ ಅರ್ಜಿ ಸಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಫಲಾನುಭವಿಗಳ ಗುರಿಯನ್ನು ಹೆಚ್ಚಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು; ಫಲಾನುಭವಿಗಳಿಗೆ ನೀಡುತ್ತಿರುವ ಸಾಲದ ಹಣ ಮತ್ತು ಸಹಾಯ ಧನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | 2021-22ನೇ ಸಾಲಿಗೆ ಗಂಗಾ ಕಲ್ಯಾಣ ಯೋಜನೆಯಡಿ 1569 ಕೊಳವೆ ಬಾವಿ ಗುರಿ ನಿಗಧಿಪಡಿಸಲಾಗಿತ್ತು. ಹೆಚ್ಚುವರಿಯಾಗಿ 1448 ಕೊಳವೆ ಬಾವಿಗಳ ಗುರಿಯನ್ನು ಮಂಜೂರು ಮಾಡಿ, ಒಟ್ಟು 3015 ಕೊಳವೆ ಬಾವಿ ಗುರಿ ಮರು ನಿಗಧಿಪಡಿಸಲಾಗಿರುತ್ತದೆ.<br><br>ಸ್ವಯಂ ಉದ್ಯೋಗ ಯೋಜನೆಯಡಿಯಲ್ಲಿ ಗುರಿ ಹಾಗೂ ಸಾಲದ ಹಣ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಇ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸುಮಾರು 1500-1600 ಅಡಿಗಳ ಆಳದವರೆಗೆ ಕೊಳವೆ ಬಾವಿ ಕೊರೆದರೂ ಸಹ ನೀರು ಸಿಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಈ) | ಹಾಗಿದ್ದಲ್ಲಿ, ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ 1500-1600 ಅಡಿಗಳ ಆಳದವರೆಗೆ ಕೊಳವೆ ಬಾವಿ ಕೊರೆಸಲು ಅವಕಾಶವಿದೆಯೇ; | ಅವಕಾಶವಿರುತ್ತದೆ. ಗಂಗಾ ಕಲ್ಯಾಣ ಯೋಜನೆಯಡಿ ಕೊರೆಯುವ ಕೊಳವೆ ಬಾವಿಗಳಿಗೆ ಆಳದ ಮಿತಿ ನಿಗಧಿ ಪಡಿಸಿರುವುದಿಲ್ಲ. ನಿಗಧಿ ಪಡಿಸಿರುವ ಘಟಕ ವೆಚ್ಚದ ಮಿತಿಯಲ್ಲಿ ಕೊಳವೆ ಬಾವಿ ಕೊರೆಯಿಸಿ, ಪಂಪ್‌ಸೆಟ್ ಮತ್ತು ಪೂರಕ ಸಾಮಗ್ರಿಗಳನ್ನು ಸರಬರಾಜು ಮಾಡಿ ವಿದ್ಯುತ್ ರೇವಣಿ ವೆಚ್ಚ ಭರಿಸಲಾಗುತ್ತಿದೆ. |

| ಉ) | ಗಂಗಾಕಲ್ಯಾಣ ಯೋಜನೆ ಯಡಿಯಲ್ಲಿ ಕೋರಿದಿರುವ ಫಲಾನುಭವಿಗಳ ಕೊಳವೆ ಬಾವಿಗಳಿಗೆ ನೀಡುತ್ತಿರುವ ಹಣ ಮತ್ತು ಸಹಾಯ ಧನವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
|---|---|---|
| ಊ) | ಹಾಗಿದ್ದಲ್ಲಿ, ಹಣ ಮತ್ತು ಸಹಾಯ ಧನವನ್ನು ಹೆಚ್ಚಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು? | ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |

**ಸಂಖ್ಯೆ**:ಹಿಂವಕ 76 ಬಿಂಎಂಎಸ್ 2022

**(ಕೋಟ ಶ್ರೀನಿವಾಸ ಪೂಜಾರಿ)**
ಹಿಂದುಳಿದ ವರ್ಗಗಳ ಕಲ್ಯಾಣ ಹಾಗೂ
ಸಮಾಜ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 272 |
| ಮಾನ್ಯ ಸದಸ್ಯರ ಹೆಸರು | ಶ್ರೀ ಖಾದರ್ ಯು.ಟಿ. (ಮಂಗಳೂರು) |
| ಉತ್ತರಿಸಬೇಕಾದ ದಿನಾಂಕ | 16.02.2022 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಲ್ಲಿ ವಿದ್ಯಾಸಿರಿ ಯೋಜನೆಯಲ್ಲಿ ಎಷ್ಟು ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿರುತ್ತಾರೆ. ಇದರಲ್ಲಿ ಎಷ್ಟು ಅರ್ಜಿಗಳನ್ನು ಈ ಯೋಜನೆಗೆ ಆಯ್ಕೆ ಮಾಡಲಾಗಿದೆ; | 2018-19ನೇ ಸಾಲಿನಲ್ಲಿ ವಿದ್ಯಾರ್ಥಿನಿಲಯಗಳ ಪ್ರವೇಶವೂ ಸೇರಿದಂತೆ 230113 ಅರ್ಜಿಗಳು ಸ್ವೀಕೃತವಾಗಿದ್ದು, ವಿದ್ಯಾರ್ಥಿನಿಲಯಗಳ ಪ್ರವೇಶವನ್ನು ಹೊರತುಪಡಿಸಿ ಒಟ್ಟು115892 ವಿದ್ಯಾರ್ಥಿಗಳಿಗೆ ವಿದ್ಯಾಸಿರಿ ಸೌಲಭ್ಯವನ್ನು ಮಂಜೂರು ಮಾಡಲಾಗಿರುತ್ತದೆ.<br><br>2019-20ನೇ ಸಾಲಿನಲ್ಲಿ ವಿದ್ಯಾರ್ಥಿನಿಲಯಗಳ ಪ್ರವೇಶವೂ ಸೇರಿದಂತೆ 271512 ಅರ್ಜಿಗಳು ಸ್ವೀಕೃತವಾಗಿದ್ದು, ವಿದ್ಯಾರ್ಥಿನಿಲಯಗಳ ಪ್ರವೇಶವನ್ನು ಹೊರತುಪಡಿಸಿ ಒಟ್ಟು 88626 ವಿದ್ಯಾರ್ಥಿಗಳಿಗೆ ವಿದ್ಯಾಸಿರಿ ಸೌಲಭ್ಯವನ್ನು ಮಂಜೂರು ಮಾಡಲಾಗಿರುತ್ತದೆ.<br><br>2020-21ನೇ ಸಾಲಿನಲ್ಲಿ ಕೋವಿಡ್-19ರ ಹಿನ್ನೆಲೆಯಲ್ಲಿ ಪೂರ್ಣ ಪ್ರಮಾಣದಲ್ಲಿ ಕಾಲೇಜುಗಳು ಆರಂಭವಾಗಿರುವುದಿಲ್ಲ ಹಾಗೂ ಬಹುತೇಕ ತರಗತಿಗಳು ಆನ್‌ಲೈನ್ ಮುಖಾಂತರ ನಡೆದಿರುವುದರಿಂದ ವಿದ್ಯಾಸಿರಿ ಯೋಜನೆಯನ್ನು ಅನುಷ್ಠಾನಗೊಳಿಸಿರುವುದಿಲ್ಲ. ಸದರಿ ಯೋಜನೆಗೆ ಬಿಡುಗಡೆಯಾದ ಅನುದಾನವನ್ನು ಶುಲ್ಕ ವಿನಾಯಿತಿ ಯೋಜನೆಗೆ ವಿನಿಯೋಗಿಸಿಕೊಳ್ಳಲಾಗಿರುತ್ತದೆ. |
| ಆ) | ಈ ವಿದ್ಯಾರ್ಥಿಗಳಿಗೆ ಮಂಜೂರು ಮಾಡಲಾದ ಅನುದಾನ ಎಷ್ಟು ? (ಜಿಲ್ಲಾವಾರು ಮಾಹಿತಿ ನೀಡುವುದು) | 2018-19 ಮತ್ತು 2019-20ನೇ ಸಾಲುಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ವಿದ್ಯಾಸಿರಿ ಯೋಜನೆಯಡಿ ಮಂಜೂರು ಮಾಡಲಾದ ಅನುದಾನದ ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |

ಸಂಖ್ಯೆ:ಹಿಂವಕ 83 ಬಿಎಂಎಸ್ 2022

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಖಾದರ್ ಯು.ಟಿ(ಮಂಗಳೂರು ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 272ಕ್ಕೆ ಅನುಬಂಧ

2018-19 ಮತ್ತು 2019-20 ನೇ ಸಾಲಿನಲ್ಲಿ ವಿದ್ಯಾಸಿರಿ ಯೋಜನೆಯಡಿ ಮಂಜೂರಾದ ವಿದ್ಯಾರ್ಥಿಗಳ ಮತ್ತು ಅನುದಾನದ ವಿವರ

| ಕ್ರ.ಸಂ | ಜಿಲ್ಲೆ | 2018-19 | | 2019-20 | |
|---|---|---|---|---|---|
| | | ವಿದ್ಯಾರ್ಥಿಗಳ ಸಂಖ್ಯೆ | ಮಂಜೂರಾದ ವಿದ್ಯಾರ್ಥಿಗಳ ಮೊತ್ತ | ವಿದ್ಯಾರ್ಥಿಗಳ ಸಂಖ್ಯೆ | ಮಂಜೂರಾದ ವಿದ್ಯಾರ್ಥಿಗಳ ಮೊತ್ತ |
| 1 | ಬಾಗಲಕೋಟೆ | 10937 | 1436.78 | 11216 | 1262.70 |
| 2 | ಬೆಂಗಳೂರು (ಗ್ರಾ) | 706 | 92.85 | 314 | 49.49 |
| 3 | ಬೆಂಗಳೂರು ನಗರ | 9086 | 1118.13 | 5290 | 891.09 |
| 4 | ಬೆಳಗಾಂ | 10680 | 1374.80 | 10153 | 1116.56 |
| 5 | ಬಳ್ಳಾರಿ | 4069 | 524.30 | 4646 | 519.63 |
| 6 | ಬೀದರ್ | 1438 | 179.54 | 758 | 102.83 |
| 7 | ಬಿಜಾಪುರ | 6912 | 907.65 | 8072 | 898.25 |
| 8 | ಚಾಮರಾಜನಗರ | 560 | 77.54 | 331 | 44.45 |
| 9 | ಚಿಕ್ಕಬಳ್ಳಾಪುರ | 1950 | 263.72 | 911 | 128.73 |
| 10 | ಚಿಕ್ಕಮಗಳೂರು | 889 | 113.31 | 465 | 63.68 |
| 11 | ಚಿತ್ರದುರ್ಗ | 4138 | 522.45 | 1665 | 242.55 |
| 12 | ದಕ್ಷಿಣ ಕನ್ನಡ | 5753 | 727.58 | 3025 | 443.30 |
| 13 | ದಾವಣಗರೆ | 5237 | 657.18 | 2238 | 304.98 |
| 14 | ಧಾರವಾಡ | 7742 | 1035.24 | 7223 | 946.49 |
| 15 | ಗದಗ | 2607 | 354.72 | 2169 | 257.93 |
| 16 | ಗುಲ್ಬರ್ಗಾ | 5162 | 691.82 | 4677 | 550.68 |
| 17 | ಹಾಸನ | 3607 | 495.38 | 2665 | 330.71 |
| 18 | ಹಾವೇರಿ | 2820 | 367.71 | 2587 | 292.40 |
| 19 | ಕೊಡಗು | 512 | 65.90 | 303 | 44.04 |
| 20 | ಕೋಲಾರ | 965 | 122.55 | 430 | 62.39 |
| 21 | ಕೊಪ್ಪಳ | 2546 | 325.85 | 2188 | 246.71 |
| 22 | ಮಂಡ್ಯ | 2607 | 347.06 | 1606 | 227.19 |
| 23 | ಮೈಸೂರು | 4569 | 604.23 | 2983 | 422.96 |
| 24 | ರಾಯಚೂರು | 3985 | 531.29 | 3534 | 415.04 |
| 25 | ರಾಮನಗರ | 779 | 102.59 | 255 | 43.07 |
| 26 | ಶಿವಮೊಗ್ಗ | 3720 | 481.88 | 2437 | 336.56 |
| 27 | ತುಮಕೂರು | 6707 | 838.29 | 3041 | 451.77 |
| 28 | ಉಡುಪಿ | 1801 | 221.03 | 1033 | 158.88 |
| 29 | ಉತ್ತರ ಕನ್ನಡ | 1806 | 207.48 | 1100 | 134.34 |
| 30 | ಯಾದಗಿರಿ | 1602 | 211.01 | 1311 | 161.73 |
| | ಒಟ್ಟು | **115892** | **14999.78** | **88626** | **11151.05** |

ಆಯುಕ್ತರ ಪರವಾಗಿ
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ
ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | :273 |
| ಉತ್ತರಿಸಬೇಕಾದ ದಿನಾಂಕ | :16.02.2022. |
| ಸದಸ್ಯರ ಹೆಸರು | :ಶ್ರೀ ಖಾದರ್ ಯುಟಿ(ಮಂಗಳೂರು) |
| ಉತ್ತರಿಸುವ ಸಚಿವರು | :ಮಾನ್ಯ ರೇಷ್ಮೆ,ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಉತ್ತಮ ಸಾಧನೆ ಮಾಡುವ ಕ್ರೀಡಾಪಟು ವಿದ್ಯಾರ್ಥಿಗಳ ಶೈಕ್ಷಣಿಕ ಶುಲ್ಕವನ್ನು ರಾಜ್ಯ ಸರ್ಕಾರದಿಂದ ಭರಿಸಲಾಗುತ್ತಿದೆಯೇ; | ಹೌದು |
| ಆ) | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಎಷ್ಟು ಕ್ರೀಡಾಪಟುಗಳಿಗೆ ಈ ಸೌಲಭ್ಯ ನೀಡಲಾಗಿದೆಯೇ; ಇದಕ್ಕಾಗಿ ವಿನಿಯೋಗಿಸಿದ ಅನುದಾನವೆಷ್ಟು? | ಕಳೆದ ಮೂರು ವರ್ಷಗಳಲ್ಲಿ ನೀಡಲಾದ ಶೈಕ್ಷಣಿಕ ಶುಲ್ಕ ಹಾಗೂ ಮಾಡಲಾದ ವೆಚ್ಚದ ವಿವರ ಕೆಳಕಂಡಂತಿದೆ:- |

| ಕ್ರ. ಸಂ. | ವರ್ಷ | ಕ್ರೀಡಾ ಪಟುಗಳ ಸಂಖ್ಯೆ | ವಿನಿಯೋಗಿಸಿದ ಅನುದಾನದ ವಿವರ (ರೂ.ಗಳಲ್ಲಿ) |
|---|---|---|---|
| 1 | 2018-19 | 352 | 1,09,39,995 |
| 2 | 2019-20 | 298 | 1,35,75,260 |
| 3 | 2020-21 | 205 | 58,56,418 |

**ವೈಎಸ್ ಡಿ/ಇವೈಡಬ್ಲ್ಯೂ/26/2022**

**(ಡಾ|| ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 274

ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ.

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 16.02.2022

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಪ್ರಯಾಣ ದರವನ್ನು ಅನಿರೀಕ್ಷಿತವಾಗಿ ಏರಿಕೆ ಮಾಡಿರುವುದರಿಂದ ಜನಸಾಮಾನ್ಯರಿಗೆ ಸಮಸ್ಯೆಯಾಗಿರುವುದು ಸರ್ಕಾರದ ಗಮನದಲ್ಲಿದೆಯೇ;</td><td rowspan="3">ಡೀಸೆಲ್ ತೈಲ ಬೆಲೆ ಹೆಚ್ಚಳದೊಂದಿಗೆ ಸಿಬ್ಬಂದಿ ವೆಚ್ಚ, ವಾಹನ ಬಿಡಿ ಭಾಗಗಳ ವೆಚ್ಚ ಒಳಗೊಂಡಂತೆ ಒಟ್ಟು ಕಾರ್ಯಾಚರಣೆ ವೆಚ್ಚ ಹೆಚ್ಚಾಗಿ ಸಂಸ್ಥೆಗಳಿಗೆ ಹೆಚ್ಚಿನ ಆರ್ಥಿಕ ಹೊರೆಯುಂಟಾದ ಕಾರಣ ಹಿಂದಿನ ದರ ಪರಿಷ್ಕರಣೆಯ 5 ವರ್ಷಗಳ ನಂತರ ಅಂದರೆ ದಿನಾಂಕ:25/26.02.2020 ರಿಂದ ಜಾರಿಗೆ ಬರುವಂತೆ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯನ್ನು ಹೊರತುಪಡಿಸಿ, ಉಳಿದ ಮೂರು ಸಾರಿಗೆ ಸಂಸ್ಥೆಗಳಾದ ಕ.ರಾ.ರ.ಸಾ.ನಿಗಮ, ವಾ.ಕ.ರ.ಸಾ.ಸಂಸ್ಥೆ ಮತ್ತು ಕ.ಕ.ರ.ಸಾ.ನಿಗಮಗಳ ಬಸ್ ಪ್ರಯಾಣ ದರವನ್ನು ಶೇ.12ರಷ್ಟು ಹೆಚ್ಚಿಸಿ ಪರಿಷ್ಕರಿಸಲಾಗಿದೆ.<br><br>ಮುಂದುವರೆದು, ಕೋವಿಡ್-19ರ ಹಿನ್ನೆಲೆಯಲ್ಲಿ ಲಾಕ್‌ಡೌನ್ ಘೋಷಣೆಯಿಂದಾಗಿ ನಿಗಮಗಳ ಸಾರಿಗೆಗಳ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಲಾಗಿತ್ತು. ಲಾಕ್‌ಡೌನ್ ತೆರವುಗೊಂಡ ನಂತರ ನಿಗಮಗಳ ಸಾರಿಗೆಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರ ಸಂಖ್ಯೆ ಕಡಿಮೆಯಾಗಿರುತ್ತದೆ. ಸಾರಿಗೆಗಳನ್ನು ಪೂರ್ಣ ಪ್ರಮಾಣದಲ್ಲಿ ಕಾರ್ಯಾಚರಣೆ ಮಾಡಲು ಸಾಧ್ಯವಾಗದಿರುವುದರಿಂದ, ನಿಗಮಗಳ ಆರ್ಥಿಕ ಸ್ಥಿತಿ ಕ್ಲಿಷ್ಟಕರವಾಗಿದೆ. ಆದಾಗ್ಯೂ, ಸಾರ್ವಜನಿಕ ಪ್ರಯಾಣಿಕರ ಹಿತದೃಷ್ಟಿಯಿಂದ ನಿಗಮದ ಸಾರಿಗೆಗಳಲ್ಲಿ ಪ್ರಸ್ತುತ ಪ್ರಯಾಣ ದರ ಹೆಚ್ಚಳ ಮಾಡಿರುವುದಿಲ್ಲ.</td></tr>
<tr><td>ಆ.</td><td>ಇದ್ದಲ್ಲಿ, ಜನ ಸಾಮಾನ್ಯರಿಗೆ ಹೊರೆಯಾಗದಂತೆ ಮಾಡಲು ಸರ್ಕಾರವು ಯಾವ ಕ್ರಮಗಳನ್ನು ಕೈಗೊಂಡಿದೆ;</td></tr>
<tr><td>ಇ.</td><td>ಪ್ರಯಾಣ ದರದ ಏರಿಕೆಯ ಪ್ರಮಾಣವೆಷ್ಟು? (ಜಿಲ್ಲಾವಾರು ವಿವರವನ್ನು ಒದಗಿಸುವುದು)</td></tr>
</table>

ಸಂಖ್ಯೆ: ಟಿಡಿ 08 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 275 |
| ಸದಸ್ಯರ ಹೆಸರು | ಶ್ರೀ ಖಾದರ್ .ಯು.ಟಿ (ಮಂಗಳೂರು) |
| ಉತ್ತರಿಸುವ ದಿನಾಂಕ | 16.02.2022 |
| ಉತ್ತರಿಸುವವರು | ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

| | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ ಹನಿ ನೀರಾವರಿ ಯೋಜನೆಗೆ ಸಹಾಯಧನ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನದಲ್ಲಿದೆಯೇ; | ಕಳೆದ ಮೂರು ವರ್ಷಗಳಿಂದ ರೇಷ್ಮೆ ಇಲಾಖೆಯು ಹನಿ ನೀರಾವರಿ ಯೋಜನೆಗೆ ಸಹಾಯಧನವನ್ನು ಬಿಡುಗಡೆ ಮಾಡಿದೆ. |
| ಆ | ಕಳೆದ ಮೂರು ವರ್ಷಗಳಲ್ಲಿ ಈ ಯೋಜನೆಯಲ್ಲಿ ನೀಡಿದ ಸಹಾಯಧನ ಹಾಗೂ ಫಲಾನುಭವಿಗಳೆಷ್ಟು? | ಈ ಯೋಜನೆಯಡಿ 2018-19 ರಿಂದ 2020-21ನೇ ಸಾಲಿನಲ್ಲಿ ನೀಡಿದ ಸಹಾಯಧನ ಹಾಗೂ ಫಲಾನುಭವಿಗಳ ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |

ಸಂಖ್ಯೆ:ರೇಷ್ಮೆ 20 ರೇಕೃವಿ 2022

**(ಡಾ. ನಾರಾಯಣ ಗೌಡ)**
**ರೇಷ್ಮೆ, ಯುವ ಸಬಲೀಕರಣ**
**ಮತ್ತು ಕ್ರೀಡಾ ಸಚಿವರು**

## ವಿಧಾನ ಸಭಾ ಪ್ರಶ್ನೆ ಸಂಖ್ಯೆ 275ಕ್ಕೆ ಅನುಬಂಧ

(ಫಲಾನುಭವಿಗಳು - ಸಂಖ್ಯೆಗಳಲ್ಲಿ, ಸಹಾಯಧನ-ರೂ.ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆಗಳು | 2018-19 | | 2019-20 | | 2020-21 | |
|---|---|---|---|---|---|---|---|
| | | ಫಲಾನುಭವಿಗಳು | ಸಹಾಯಧನ | ಫಲಾನುಭವಿಗಳು | ಸಹಾಯಧನ | ಫಲಾನುಭವಿಗಳು | ಸಹಾಯಧನ |
| 1 | ಬೆಂಗಳೂರು (ಗ್ರಾ) | 318 | 202.993 | 355 | 228.298 | 333 | 227.575 |
| 2 | ಬೆಂಗಳೂರು (ನ) | 100 | 52.591 | 80 | 47.436 | 68 | 30.489 |
| 3 | ಚಿತ್ರದುರ್ಗ | 466 | 289.021 | 309 | 200.592 | 403 | 261.858 |
| 4 | ಕೋಲಾರ | 1509 | 991.96 | 953 | 624.826 | 912 | 591.631 |
| 5 | ತುಮಕೂರು | 1016 | 568.159 | 532 | 315.001 | 692 | 406.394 |
| 6 | ರಾಮನಗರಂ | 1462 | 775.127 | 830 | 383.237 | 1135 | 537.413 |
| 7 | ಚಿಕ್ಕಬಳ್ಳಾಪುರ | 1269 | 721.138 | 350 | 329.892 | 866 | 509.02 |
| 8 | ಶಿವಮೊಗ್ಗ | 20 | 10.924 | | | 12 | 4.859 |
| 9 | ದಾವಣಗೆರೆ | 123 | 89.945 | 58 | 36.996 | 64 | 46.999 |
| 10 | ಚಾಮರಾಜನಗರ | 54 | 29.965 | 27 | 14.22 | 85 | 52.67 |
| 11 | ಚಿಕ್ಕಮಗಳೂರು | 30 | 14.731 | 13 | 7.156 | 24 | 8.969 |
| 12 | ದಕ್ಷಿಣ ಕನ್ನಡ | | | | | | |
| 13 | ಕೊಡಗು | | | | | | |
| 14 | ಮಂಡ್ಯ | 167 | 110.809 | 106 | 39.262 | 203 | 82.804 |
| 15 | ಮೈಸೂರು | 210 | 119.58 | 59 | 35.299 | 128 | 66.934 |
| 16 | ಉಡುಪಿ | | | | | | |
| 17 | ಬಳ್ಳಾರಿ | 148 | 98.495 | 139 | 90.414 | 124 | 84.793 |
| 18 | ಬೀದರ್ | 37 | 24.864 | 38 | 22.807 | 39 | 29.459 |
| 19 | ಗುಲ್ಬರ್ಗಾ | 145 | 113.992 | 118 | 74.76 | 113 | 96.61 |
| 20 | ಕೊಪ್ಪಳ | 24 | 17.978 | 37 | 26.918 | 57 | 50.999 |
| 21 | ರಾಯಚೂರು | 95 | 81.919 | 78 | 57.828 | 71 | 50.539 |
| 22 | ಯಾದಗಿರಿ | 125 | 88.906 | 48 | 33.569 | 50 | 46.573 |
| 23 | ಬಾಗಲಕೋಟೆ | 208 | 107.924 | 84 | 45.782 | 167 | 90.565 |
| 24 | ಬೆಳಗಾವಿ | 185 | 88.716 | 111 | 58.035 | 168 | 97.719 |
| 25 | ಬಿಜಾಪುರ | 284 | 167.864 | 37 | 20.75 | 68 | 30.2 |
| 26 | ಧಾರವಾಡ | 40 | 30.885 | 18 | 7.999 | 7 | 4.106 |
| 27 | ಗದಗ | 61 | 47.957 | 22 | 20.38 | 22 | 22.323 |
| 28 | ಹಾವೇರಿ | 306 | 233.738 | 73 | 65.191 | 7 | 22.482 |
| 29 | ಉತ್ತರ ಕನ್ನಡ | 53 | 21.598 | 27 | 10.899 | 37 | 12.361 |
| 31 | ಹಾಸನ | 213 | 103.85 | 92 | 42.245 | 136 | 68.023 |
| | ಆಡಳಿತ ವೆಚ್ಚ | | 0.885 | | 0.944 | | 0.944 |
| | ರಾಜ್ಯದ ಒಟ್ಟು | **8668** | **5206.514** | **4594** | **2840.736** | **5991** | **3535.311** |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 276

ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ (ಮಂಗಳೂರು)

ಉತ್ತರಿಸುವ ದಿನಾಂಕ: 16.02.2022

ಉತ್ತರಿಸುವ ಸಚಿವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಮತ್ತು ಪಂಚಾಯತ್ ರಾಜ್ ಸಚಿವರು

******

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಳೆದ ನಾಲ್ಕು ತಿಂಗಳುಗಳಿಂದ ಇ-ಸ್ವತ್ತು ತಂತ್ರಾಂಶದ ಸಮಸ್ಯೆಯಿಂದಾಗಿ ಗ್ರಾಮೀಣ ಭಾಗದಲ್ಲಿ 9/11 A ಪಡೆಯಲಾಗದೆ ಸಂಕಷ್ಟ ಎದುರಿಸುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ; | ಹೌದು |
| ಆ) | ಇದ್ದಲ್ಲಿ, ಇದರ ಪರಿಹಾರಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಇ-ಸ್ವತ್ತು ತಂತ್ರಾಂಶದ ಭದ್ರತೆಯನ್ನು ಹೆಚ್ಚಿಸಲು ಮತ್ತು ಹೆಚ್ಚುವರಿ ದೃಢೀಕರಣಗಳನ್ನು ಅಳವಡಿಸುವ ಸಲುವಾಗಿ ಆಸ್ತಿಗಳನ್ನು ಅನುಮೋದಿಸುವಾಗ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳ ಡಿಜಿಟಲ್ ಸಹಿಯೊಂದಿಗೆ ಬಯೋಮೆಟ್ರಿಕ್ ದೃಢೀಕರಣವನ್ನು ಮತ್ತು ಇತರೆ ಅನುಮೋದನೆ ಮತ್ತು ಬದಲಾವಣೆ ಮಾಡುವಾಗ ಇ-ಸ್ವತ್ತು ತಂತ್ರಾಂಶದಲ್ಲಿ ಬಯೋಮೆಟ್ರಿಕ್ ದೃಢೀಕರಣವನ್ನು ಅಳವಡಿಸಲಾಗಿತ್ತು. ಇದರಿಂದಾಗಿ, ಇ-ಸ್ವತ್ತು ತಂತ್ರಾಂಶವು ನಿಧಾನಗತಿಯಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಆದುದರಿಂದ ಇ-ಸ್ವತ್ತು ತಂತ್ರಾಂಶದಲ್ಲಿ ಅಳವಡಿಸಲಾಗಿದ್ದ, ಹೆಚ್ಚುವರಿ ದೃಢೀಕರಣಗಳನ್ನು ಸಡಿಲೀಕರಿಸಿ, ಇ-ಸ್ವತ್ತು ತಂತ್ರಾಂಶವು ಸರಿಯಾಗಿ ಕಾರ್ಯನಿರ್ವಹಣೆ ಮಾಡುವಂತೆ ಇಲಾಖೆಯಿಂದ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಗ್ರಾಅಪ/19/ಇ-ಆಡಳಿತ/2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು
ಮತ್ತು ಪಂಚಾಯತ್ ರಾಜ್ ಸಚಿವರು.

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 277

ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ.

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 16.02.2022

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ.</td><td>ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸದಾಗಿ ಕೆ.ಎಸ್.ಆರ್.ಟಿ.ಸಿ ನಗರ ಸಾರಿಗೆ ಬಸ್ಸುಗಳ ಪರ್ಮಿಟ್‌ಗಾಗಿ ಸಲ್ಲಿಕೆಯಾದ ಪ್ರಸ್ತಾವನೆಗಳೆಷ್ಟು? (ತಾಲ್ಲೂಕುವಾರು ಮಾಹಿತಿ ನೀಡುವುದು)</td><td>ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೊಸದಾಗಿ ಕೆ.ಎಸ್.ಆರ್.ಟಿ.ಸಿ ಬಸ್ಸುಗಳ ಪರ್ಮಿಟ್‌ಗಾಗಿ 18 ಮಾರ್ಗಗಳಿಗೆ 212 ಸುತ್ತುವಳಿಗಳ ಕಾರ್ಯಾಚರಣೆಗಾಗಿ ಒಟ್ಟು 24 ಬಸ್ಸುಗಳಿಗೆ ಸಮಗ್ರ ಪ್ರದೇಶ ಯೋಜನೆ ಅಡಿಯಲ್ಲಿ ಅರ್ಜಿಯನ್ನು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಮಂಗಳೂರಿನಲ್ಲಿ ಸಲ್ಲಿಸಲಾಗಿರುತ್ತದೆ. ಅದರಲ್ಲಿ 15 ಮಾರ್ಗಗಳಿಗೆ ನಗರ ಸಾರಿಗೆ ಪರವಾನಗಿ ಅರ್ಜಿ ಸಲ್ಲಿಸಲಾಗಿರುತ್ತದೆ.<br><br>ತಾಲ್ಲೂಕುವಾರು ಅರ್ಜಿಗಳ ವಿವರಗಳು ಈ ಕೆಳಕಂಡಂತಿದೆ:-<br>
<table>
<tr><th>ಕ್ರ. ಸಂ.</th><th>ತಾಲ್ಲೂಕು ಹೆಸರು</th><th>ಸಲ್ಲಿಸಿರುವ ಒಟ್ಟು ಅರ್ಜಿಗಳ ಸಂಖ್ಯೆ</th></tr>
<tr><td>1</td><td>ಮಂಗಳೂರು</td><td>18</td></tr>
<tr><td>2</td><td>ಬಂಟ್ವಾಳ</td><td>-</td></tr>
<tr><td>3</td><td>ಉಳ್ಳಾಲ</td><td>-</td></tr>
<tr><td>4</td><td>ಸುಳ್ಯ</td><td>-</td></tr>
<tr><td>5</td><td>ಬೆಳ್ತಂಗಡಿ</td><td>-</td></tr>
<tr><td>6</td><td>ಪುತ್ತೂರು</td><td>-</td></tr>
<tr><td></td><td>ಒಟ್ಟು</td><td>18</td></tr>
</table></td></tr>
<tr><td>ಆ.</td><td>ಕಳೆದ 3 ವರ್ಷಗಳಿಂದ ಮಂಗಳೂರು ನಗರ ದಕ್ಷಿಣ ವಿಧಾನ ಸಭಾ ಕ್ಷೇತ್ರದಲ್ಲಿ ಎಷ್ಟು ರಾಜ್ಯ ರಸ್ತೆ ಸಂಸ್ಥೆ ನಗರ ಸಾರಿಗೆ ಬಸ್ಸುಗಳನ್ನು ಓಡಿಸಲು ಪರ್ಮಿಟ್ ನೀಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು)</td><td>ಕಳೆದ 3 ವರ್ಷಗಳಿಂದ ಮಂಗಳೂರು ನಗರ ದಕ್ಷಿಣ ವಿಧಾನ ಸಭಾ ಕ್ಷೇತ್ರದಲ್ಲಿ ಒಟ್ಟು 3 ನಗರ ಸಾರಿಗೆ ಬಸ್ಸುಗಳನ್ನು ಓಡಿಸಲು ರಾಜ್ಯ ರಸ್ತೆ ಸಂಸ್ಥೆಗೆ ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಮಂಗಳೂರಿನಿಂದ ಪರ್ಮಿಟ್ ಮಂಜೂರು ಮಾಡಲಾಗಿರುತ್ತದೆ. ಸದರಿ ಪರವಾನಗೆ ವಿವರಗಳು ಈ ಕೆಳಕಂಡಂತಿದೆ:-<br><br>ಕಂಕನಾಡಿ ರೈಲ್ವೇ ನಿಲ್ದಾಣದಿಂದ ಬೊಕ್ಕಪಟ್ಣ ವಯಾ ಪಂಪ್‌ವೆಲ್ - ಕಂಕನಾಡಿ - ಜ್ಯೋತಿ - ಬಂಟ್ಸ್ ಹೋಸ್ಟೆಲ್ - ಪಿ.ವಿ.ಎಸ್ - ಲಾಲ್‌ಬಾಗ್ - ಲೇಡಿಹಿಲ್ ಸುಲ್ತಾನ್‌ಬತ್ತೇರಿ - ಅಮೃತ ಕಾಲೇಜು (18 ಸಿಂಗಲ್ ಟ್ರಿಪ್ 1 ಬಸ್ಸು)</td></tr>
</table>

|  |  |  |
|---|---|---|
|  |  | 1. ಬಜಾಲ್ ಪಡ್ಪು ನಿಂದ ಲ್ಯಾಂಡ್‌ಲಿಂಕ್ಸ್ ವಯಾ ಕಲ್ಲಕಟ್ಟೆ - ವಾಣಿನಗರ - ಬಜಾಲ್ ಕ್ರಾಸ್ - ಪಂಪ್‌ವೆಲ್ - ಜ್ಯೋತಿ - ಬಂಟ್ಸ್ ಹೋಸ್ಟೆಲ್ - ಲೇಡಿಹಿಲ್ - ಕೆ.ಎಸ್.ಆರ್.ಟಿ.ಸಿ - ಕಾಪಿಕಾಡ್ - ಕೊಂಚಾಡಿ (8 ಸುತ್ತು ಪ್ರತಿ ದಿನ 1 ಬಸ್ಸು)<br>2. ಲ್ಯಾಂಡ್‌ಲಿಂಕ್ಸ್ ನಿಂದ ಬಜಾಲ್ ಪಡ್ಪು ವಯಾ ಕೊಂಚಾಡಿ-ಕಾಪಿಕಾಡ್- ಕೆ.ಎಸ್.ಆರ್.ಟಿ.ಸಿ - ಬಂಟ್ಸ್ ಹೋಸ್ಟೆಲ್ - ಜ್ಯೋತಿ - ಪಂಪ್‌ವೆಲ್ - ಬಜಾಲ್ ಕ್ರಾಸ್ - ವಾಣಿನಗರ - ಕಲ್ಲಕಟ್ಟೆ (8 ಸುತ್ತು ಪ್ರತಿ ದಿನ 1 ಬಸ್ಸು) |
| ಇ. | ಮಂಗಳೂರಿನಿಂದ ವಿವಿಧೆಡೆಗೆ ಸಂಪರ್ಕ ಕಲ್ಪಿಸಲು ಕಳೆದ 2020-21 ರಿಂದ 2021-22ನೇ ಸಾಲಿನವರೆಗೆ ಎಷ್ಟು ನೂತನ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಬಸ್ಸುಗಳನ್ನು ನೀಡಲಾಗಿದೆ; ನೀಡಲಾಗಿದ್ದಲ್ಲಿ, ನೂತನ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳ ಸಮಯದ ವೇಳಾಪಟ್ಟಿಯೊಂದಿಗೆ ಸಂಪೂರ್ಣ ಮಾಹಿತಿಯನ್ನು ನೀಡುವುದು; | 2020-21ನೇ ಸಾಲಿನಲ್ಲಿ ಮಂಗಳೂರು ವಿಭಾಗಕ್ಕೆ 15 ಹೊಸ ಬಸ್ಸುಗಳನ್ನು ನೀಡಲಾಗಿರುತ್ತದೆ. ಸದರಿ ಬಸ್ಸುಗಳ ಸಮಯದ ವೇಳಾ ಪಟ್ಟಿ ವಿವರಗಳ ಮಾಹಿತಿಯನ್ನು **"ಅನುಬಂಧ-ಅ"** ರಲ್ಲಿ ನೀಡಲಾಗಿದೆ.<br>2021-22ನೇ ಸಾಲಿನಲ್ಲಿ ಯಾವುದೇ ನೂತನ ವಾಹನಗಳನ್ನು ನೀಡಿರುವುದಿಲ್ಲ. |
| ಈ. | 2020-21 ರಿಂದ 2021-22ನೇ ಸಾಲಿನವರೆಗೆ ಎಷ್ಟು ನೂತನ ಕೆ.ಎಸ್.ಆರ್.ಟಿ.ಸಿ ಬಸ್ಸುಗಳನ್ನು ಯಾವ ಯಾವ ಜಿಲ್ಲೆಗಳಿಗೆ ನೀಡಲಾಗಿದೆ? (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿಯನ್ನು ನೀಡುವುದು) | ಕ.ರಾ.ರ.ಸಾ.ನಿಗಮದಲ್ಲಿ 2020-21 ಹಾಗೂ 2021-22 ನೇ ಸಾಲಿನಲ್ಲಿ ಜಿಲ್ಲಾವಾರು ನೀಡಿರುವ ಹೊಸ ವಾಹನಗಳ ವಿವರಗಳನ್ನು **"ಅನುಬಂಧ-"ಆ"** ರಲ್ಲಿ ನೀಡಲಾಗಿದೆ. |

ಸಂಖ್ಯೆ: ಟಿಡಿ 9 ಟಿಸಿಕ್ಯೂ 2022

(ಬಿ.ಶ್ರೀರಾಮುಲು)

ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ

ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 278

ಉತ್ತರಿಸಬೇಕಾದ ದಿನಾಂಕ : 16.02.2022

ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ)

ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಂಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಯುವಜನ ಕ್ರೀಡಾ ಇಲಾಖೆಗೆ ಒಳಪಡುವ ಕ್ರೀಡಾಂಗಣಗಳಿಗೆ ಮೂಲಭೂತ ಸೌಕರ್ಯ ಹಾಗೂ ನೂತನ ಕ್ರೀಡಾಂಗಣಕ್ಕೆ ಸಲ್ಲಿಸಿರುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಸರ್ಕಾರದ ಹಂತದಲ್ಲಿ ಕೈಗೊಂಡಿರುವ ಕ್ರಮಗಳೇನು; ಹಾಗೂ ಮೂಲಭೂತ ಸೌಕರ್ಯಗಳನ್ನು ಒದಗಿಸಲು ವಿಳಂಬ' ಮಾಡಲು ಕಾರಣಗಳೇನು;<br><br>ಯುವಜನ ಕ್ರೀಡಾ ಇಲಾಖೆಯಿಂದ 2020-21 ರಿಂದ 2021-22ನೇ ಸಾಲಿನವರೆಗೆ ಸರ್ಕಾರದ ಬಂದಿರುವ ಅನುದಾನ ಎಷ್ಟು; | ಪ್ರಸ್ತುತ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ವತಿಯಿಂದ ಕರ್ನಾಟಕ ರಾಜ್ಯಾದ್ಯಂತ ಪ್ರಗತಿಯಲ್ಲಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಆದ್ಯತೆ ನೀಡಲಾಗಿರುತ್ತದೆ. ಅನುದಾನದ ಕೊರತೆ ಇರುವುದರಿಂದ, ಪ್ರಸಕ್ತ ಸಾಲಿನಲ್ಲಿ ಸದರಿ ಕಾಮಗಾರಿಗಳಿಗೆ ಯಾವುದೇ ಅನುದಾನವು ಹಂಚಿಕೆಯಾಗಿರುವುದಿಲ್ಲ. ಆದುದರಿಂದ, ಸದರಿ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಸಾಧ್ಯವಾಗಿರುವುದಿಲ್ಲ.<br><br>ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ 2020-21 ಮತ್ತು 2021-22ನೇ ಸಾಲಿನಲ್ಲಿ ಸರ್ಕಾರದಿಂದ ಹಂಚಿಕೆಯಾಗಿರುವ ಅನುದಾನದ ವಿವರ ಇಂತಿದೆ;<br><br>(ರೂ. ಲಕ್ಷಗಳಲ್ಲಿ) |

| ವರ್ಷ | 2020-21 | 2021-22 |
|---|---|---|
| ರಾಜ್ಯ ವಲಯ | 11956.50 | 11936.84 |
| ಜಿಲ್ಲಾ ಪಂಚಾಯತ್ ವಲಯ | 4970.64 | 3617.26 |
| **ಒಟ್ಟು** | **16927.14** | **15554.10** |

| ಇ) | ಹಾಗಿದ್ದಲ್ಲಿ, ಯಾವ ಯಾವ ಯೋಜನೆಗೆ ಅನುದಾನವನ್ನು ಹಂಚಿಕೆ ಮಾಡಲಾಗಿದೆ; | ಯೋಜನಾವಾರು ವಿವರವನ್ನು **ಅನುಬಂಧ-1 ರಲ್ಲಿ** ಒದಗಿಸಿದೆ. |
|---|---|---|
| ಈ) | 2020-21 ರಿಂದ 2021-22ನೇ ಸಾಲಿನ ವರೆಗೆ ವಿಧಾನಸಭಾ ಕ್ಷೇತ್ರವಾರು ಮೂಲಭೂತ ಸೌಕರ್ಯಕ್ಕೆ ಹಾಗೂ ನೂತನ ಕ್ರೀಡಾಂಗಣಗಳಿಗೆ ನೀಡಲಾದ ಅನುದಾನ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು). | 2020-21 ರಿಂದ 2021-22ನೇ ಸಾಲಿನ ವರೆಗೆ ಮೂಲಭೂತ ಸೌಕರ್ಯಕ್ಕೆ ಹಾಗೂ ನೂತನ ಕ್ರೀಡಾಂಗಣಗಳಿಗೆ ಒಟ್ಟು ರೂ. 2593.33 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ವಿಧಾನಸಭಾ ಕ್ಷೇತ್ರವಾರು ಮಾಹಿತಿಯನ್ನು **ಅನುಬಂಧ-2 ರಲ್ಲಿ** ಒದಗಿಸಲಾಗಿದೆ. |

**ವೈಎಸ್ ಡಿ-ಇಬಿಬಿ / 9 / 2022**

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು.

## ಅನುಬಂಧ-1

**ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ರಾಜ್ಯ ಘಟಕದಡಿಯಲ್ಲಿ 2020-21 ಮತ್ತು 2021-22ನೇ ಸಾಲಿನಲ್ಲಿ ಯೋಜನೆ ಅಡಿಯಲ್ಲಿ ಒದಗಿಸಿರುವ ಅನುದಾನದ ವಿವರ.**

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಲೆಕ್ಕ ಶೀರ್ಷಿಕೆ ಮತ್ತು ಯೋಜನೆ ಹೆಸರು | 2020-21ನೇ ಸಾಲಿನ ಆಯವ್ಯಯ ಹಂಚಿಕೆ | 2021-22ನೇ ಸಾಲಿನ ಆಯವ್ಯಯ ಹಂಚಿಕೆ |
|---|---|---|---|
| 1 | 2204-00-003-0-01 ಸೇವೆಯಲ್ಲಿರುವ ಇಲಾಖಾ ಅಧಿಕಾರಿಗಳು ಮತ್ತು ತರಬೇತುದಾರರಿಗೆ ತರಬೇತಿ ಕಾರ್ಯಕ್ರಮಗಳು 015 ಪೂರಕ ವೆಚ್ಚ | 100.00 | 50.00 |
| 2 | 2204-00-104-0-32 059 ಗ್ರಾಮೀಣ ಕ್ರೀಡೆ ಮತ್ತು ಪಂದ್ಯಗಳು, ಇತರೇ ವೆಚ್ಚ | 450.00 | 126.00 |
| 3 | 2204-00-104-0-12 200 ಕ್ರೀಡಾಂಗಣಗಳ ನಿರ್ವಹಣೆ ವೆಚ್ಚ | 0.00 | 1500.00 |
| 4 | 2204-00-001-0-01 ಪ್ರಚಾರ ಅಭಿಯಾನ 051 ಸಾಮಾನ್ಯ ವೆಚ್ಚಗಳು | 3.00 | 3.00 |
| 5 | 2204-00-104-0-29 ಕರ್ನಾಟಕ ಕ್ರೀಡಾ ಪ್ರಾಧಿಕಾರ | 1984.00 | 1745.00 |
| 6 | 2204-00-104-0-02 ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ | 1210.00 | 1300.00 |
| 7 | ಎಸ್.ಸಿ.ಪಿ/ಟಿ.ಎಸ್.ಪಿ | 2233.00 | 1101.84 |
| 8 | 2204-00-103-0-27 ಯುವ ನೀತಿ ಅನುಷ್ಠಾನ | 2351.00 | 1000.00 |
| 9 | 4202-03-102-0-01 132 ರಾಜ್ಯ ಮಟ್ಟದ ಕ್ರೀಡಾಂಗಣಗಳ ನಿರ್ಮಾಣ | 1250.00 | 1200.00 |
| 10 | 2204-00-104-0-25 ಕ್ರೀಡಾ ಸಂಸ್ಥೆಗಳು ಮತ್ತು ನಿಲಯ, ಅಧಿಕಾರಿ / ಸಿಬ್ಬಂದಿ ವರ್ಗದವರ ವೇತನ ಮತ್ತು ಇತರೇ ಭತ್ಯೆ | 1027.00 | 1921.00 |
| 11 | 4202-03-102-0-03 386 ಬಂಡವಾಳ ವೆಚ್ಚ | 640.00 | 1140.00 |
| 12 | 2204-00-103-0-02 051 ಸಾಮಾನ್ಯ ವೆಚ್ಚಗಳು, ರಾಜ್ಯ ಯುವ ಕೇಂದ್ರ | 182.50 | 115.00 |
| 13 | 2204-00-102-2-03 ರಾಜ್ಯ/ರಾಷ್ಟ್ರ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಿದ ಪ್ರೌಢ ಶಾಲಾ ವಿದ್ಯಾರ್ಥಿಗಳಿಗೆ ಉತ್ತೇಜಿತ ವಿದ್ಯಾರ್ಥಿ ವೇತನ, ಯುವಜನೋತ್ಸವ | 101.00 | 300.00 |
| 14 | 2204-00-001-1-01 ರಾಜ್ಯ ಮಟ್ಟದ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರ ವೇತನ ಮತ್ತು ಇತರೇ ಭತ್ಯೆಗಳಿಗಾಗಿ | 425.00 | 435.00 |
| | | **11956.50** | **11936.84** |
| | **ಜಿಲ್ಲಾ ಪಂಚಾಯತ್ ವಲಯ** | **4970.64** | **3617.26** |

| ಅನುಬಂಧ-2 | | | | |
|---|---|---|---|---|
| 2020-21ನೇ ಸಾಲಿನಲ್ಲಿ ವಿಧಾನಸಭಾ ಕ್ಷೇತ್ರವಾರು ಮೂಲಭೂತ ಸೌಕರ್ಯಕ್ಕೆ ಹಾಗೂ ನೂತನ ಕ್ರೀಡಾಂಗಣಗಳಿಗೆ ನೀಡಲಾದ ಅನುದಾನದ ವಿವರ (ರೂ ಲಕ್ಷಗಳಲ್ಲಿ) | | | | |
| ಕ್ರ. ಸಂ | ಜಿಲ್ಲೆ | ಕಾಮಗಾರಿ ವಿವರ | ಬಿಡುಗಡೆ ಯಾದ ಮೊತ್ತ | ವಿಧಾನ ಸಭಾ ಕ್ಷೇತ್ರ |
| 1 | ಬೆಳಗಾವಿ | ಸವದತ್ತಿ ತಾಲ್ಲೂಕು ಕ್ರೀಡಾಂಗಣ ಅಭಿವೃದ್ಧಿ | 50.00 | ಸವದತ್ತಿ |
| 2 | ಚಿಕ್ಕಮಗಳೂರು | ನೇತಾಜಿ ಸುಭಾಷ್ ಚಂದ್ರ ಬೋಸ್ ಕ್ರೀಡಾಂಗಣ ಅಭಿವೃದ್ಧಿ | 30.00 | ಚಿಕ್ಕಮಗಳೂರು |
| 3 | ಚಿಕ್ಕಮಗಳೂರು | ಕಡೂರು ತಾಲ್ಲೂಕು ಕ್ರೀಡಾಂಗಣ ಅಭಿವೃದ್ಧಿ | 20.00 | ಕಡೂರು |
| 4 | ಮೈಸೂರು | ಹುಣಸೂರು ಒಳಾಂಗಣ ಕ್ರೀಡಾಂಗಣ ಅಭಿವೃದ್ಧಿ | 50.00 | ಹುಣಸೂರು |
| 5 | ಉತ್ತರ ಕನ್ನಡ | ಶಿರಸಿ ಕ್ರೀಡಾಂಗಣದಲ್ಲಿ ವಿವಿದ್ದೋದ್ದೇಶ ಒಳಾಂಗಣ ಕ್ರೀಡಾಂಗಣ ನಿರ್ಮಾಣ | 200.00 | ಶಿರಸಿ |
| 6 | ಬೆಂಗಳೂರು | ಕುಂಬಳಗೋಡು ತರಬೇತಿ ಆವರಣದಲ್ಲಿ ವಿವೇಕಾನಂದ ಭವನ ನಿರ್ಮಾಣ | 190.00 | ಯಶವಂತಪುರ |
| 7 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾ ಸಂಕೀರ್ಣ ಹಾಗೂ ಕೋರಮಂಗಲ ಒಳಾಂಗಣ ಕ್ರೀಡಾಂಗಣಗಳಿಗೆ ಎಲ್.ಇ.ಡಿ. ಫ್ಲಡ್ ಲೈಟ್‌ಗಳನ್ನು ಅಳವಡಿಸುವುದು | 10.00 | ಶಿವಾಜಿನಗರ & ಬಿ.ಟಿ.ಎಂ. ಲೇಔಟ್ |
| 8 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣ ಹಾಗೂ ಕೋರಮಂಗಲ ಒಳಾಂಗಣ ಕ್ರೀಡಾಂಗಣದ ಜೇನರೇಟರ್ ಬದಲಾವಣೆ ಹಾಗೂ ಹಾಲಿಯಿರುವ ಡಿ.ಜಿ. ಅನ್ನು ದುರಸ್ತಿ ಪಡಿಸುವುದು. ಹಾಗೂ ಇತರೆ ಕಾಮಗಾರಿಗಳು | 15.00 | ಶಿವಾಜಿನಗರ & ಬಿ.ಟಿ.ಎಂ. ಲೇಔಟ್ |
| 9 | ಬೆಂಗಳೂರು | ಗುಂಜೂರು ಕ್ರೀಡಾಂಗಣಕ್ಕೆ ಬೋರ್ ವೆಲ್ ಅಳವಡಿಸುವುದು ಹಾಗೂ ಇತರೆ ಕಾಮಗಾರಿಗಳು | 5.00 | ಮಹದೇವಪುರ |
| 10 | ಬೆಂಗಳೂರು | ವಿದ್ಯಾನಗರದ ರಾಷ್ಟ್ರೀಯ ಯುವ ಕೇಂದ್ರದ ಸಭಾಂಗಣ ಉನ್ನತೀಕರಣ ಕಾಮಗಾರಿ | 4.54 | ಬ್ಯಾಟರಾಯನಪುರ |
| 11 | ಬೆಂಗಳೂರು | ವಿದ್ಯಾನಗರದ ರಾಷ್ಟ್ರೀಯ ಯುವ ಕೇಂದ್ರದ ಆವರಣದಲ್ಲಿ ಮ್ಯೂಷಿಯಂ ನಿರ್ಮಾಣ | 10.00 | ಬ್ಯಾಟರಾಯನಪುರ |
| 12 | ಬೆಂಗಳೂರು | ವಿದ್ಯಾನಗರದ ರಾಷ್ಟ್ರೀಯ ಯುವ ಕೇಂದ್ರ ಆವರಣದ ಒಳಾಂಗಣ ಕ್ರೀಡಾಂಗಣಕ್ಕೆ 250 ಕೆ.ವ್ಹಿ.ಎ. ಜನರೇಟರ್ ಅಳವಡಿಸುವುದು | 5.00 | ಬ್ಯಾಟರಾಯನಪುರ |
| 13 | ಬೆಂಗಳೂರು | ಶ್ರೀ ಕಂಠೀರವ ಹೊರಾಂಗಣ ಕ್ರೀಡಾಂಗಣದ ವಿಡಿಯೋ ವಾಲ್ ಅಳವಡಿಸುವುದು | 167.99 | ಶಿವಾಜಿನಗರ |
| 14 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದ ಸಿಂಥೆಟಿಕ್ ಅಥ್ಲೆಟಿಕ್ ಟ್ರ್ಯಾಕ್ ಅಳವಡಿಸುವುದು. | 277.00 | ಶಿವಾಜಿನಗರ |
| 15 | ಬೆಂಗಳೂರು | ಶ್ರೀ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ಅಳವಡಿಸಲಾಗಿರುವ ಮ್ಯಾಪಲ್ ಮರದ ನೆಲಹಾಸುವಿಗೆ ಬೋನೋ ಪಾಲಿಷ್ ಮಾಡುವುದು. | 7.90 | ಶಿವಾಜಿನಗರ |
| 16 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದ ನಿರ್ವಹಣೆ | 269.80 | ಶಿವಾಜಿನಗರ |

| 17 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದಲ್ಲಿರುವ ಕ್ರೀಡಾ ವಿಜ್ಞಾನ ಕೇಂದ್ರವನ್ನು ದುರಸ್ಥಿ ಪಡಿಸುವ ಕುರಿತು. | 75.00 | ಶಿವಾಜಿನಗರ |
|---|---|---|---|---|
| 18 | ಬೆಂಗಳೂರು | ಶ್ರೀ ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದಲ್ಲಿರುವ ಎಕ್ಸಲೆನ್ಸಿ ಕಟ್ಟಡದ ಮೇಲೆ ಹೊಸದಾಗಿ ಎರಡನೇ ಮಹಡಿಯ ಕಾಮಗಾರಿ | 150.00 | ಬ್ಯಾಟರಾಯನಪುರ |
| 19 | ಬೆಂಗಳೂರು | ಶ್ರೀ ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದಲ್ಲಿರುವ ಕಾಂಪೌಂಡು ಗೋಡೆ ಎತ್ತರಿಸುವುದು. | 25.60 | ಬ್ಯಾಟರಾಯನಪುರ |
| 20 | ಬೆಂಗಳೂರು | ಶ್ರೀ ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದ ಸುತ್ತಲೂ ಮಣ್ಣಿನ ರಸ್ತೆ ನಿರ್ಮಾಣ | 30.00 | ಬ್ಯಾಟರಾಯನಪುರ |
| 21 | ಬೆಂಗಳೂರು | ಶ್ರೀ ಜಯಪ್ರಕಾಶ ನಾರಾಯಣ ರಾಷ್ಟ್ರೀÃಯ ಯುವ ತರಬೇತಿ ಕೇಂದ್ರದಲ್ಲಿರುವ ವಿದ್ಯಾರ್ಥಿ ನಿಲಯಗಳ ನವೀಕರಣ ಕಾಮಗಾರಿ | 135.00 | ಬ್ಯಾಟರಾಯನಪುರ |
| 22 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದ ಸುತ್ತಲೂ ಚೈನ್ ಲಿಂಕ್ ಫೆನ್ಸಿಂಗ್ ಅಳವಡಿಸುವ ಕಾಮಗಾರಿ (ಹೆಚ್ಚುವರಿ ಕಾಮಗಾರಿ) | 14.85 | ಶಿವಾಜಿನಗರ |
| 23 | ಬೆಂಗಳೂರು | ಗುರುನಾನಕ್ ಭವನ ಅಭಿವೃದ್ಧಿ ಕಾಮಗಾರಿ | 32.00 | ಶಿವಾಜಿನಗರ |
| 24 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದಲ್ಲಿರುವ ವಾಲಿಬಾಲ್ ಅಂಕಣ ನವೀಕರಣ | 20.41 | ಶಿವಾಜಿನಗರ |
| | | | **1,255.09** | |

ಅನುಬಂಧ-2

**2021-22ನೇ ಸಾಲಿನಲ್ಲಿ ವಿಧಾನಸಭಾ ಕ್ಷೇತ್ರವಾರು ಮೂಲಭೂತ ಸೌಕರ್ಯಕ್ಕೆ ಹಾಗೂ ನೂತನ ಕ್ರೀಡಾಂಗಣಗಳಿಗೆ ನೀಡಲಾದ ಅನುದಾನ (ರೂ ಲಕ್ಷಗಳಲ್ಲಿ)**

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ಕಾಮಗಾರಿ ವಿವರ | ಬಿಡುಗಡೆ ಮಾಡಿರುವ ಮೊತ್ತ | ವಿಧಾನ ಸಭಾ ಕ್ಷೇತ್ರ |
|---|---|---|---|---|---|
| 1 | ಗದಗ | ಗದಗ | ಜಿಲ್ಲಾ ಕ್ರೀಡಾಂಗಣಕ್ಕೆ ಟೆನ್ಸೈಲ್ ಮೆಂಬ್ರೇನ್ ಛಾವಣಿ ಅಳವಡಿಸುವುದು. | 298.90 | ಗದಗ |
| 2 | ಹಾಸನ | ಹೊಳೆನರಸೀಪುರ | ಒಳಾಂಗಣ ಕ್ರೀಡಾಂಗಣ ನಿರ್ಮಾಣ | 124.73 | ಹೊಳೆನರಸೀಪುರ |
| 3 | ಹಾಸನ | ಹಾಸನ | ಜಿಲ್ಲಾ ಕ್ರೀಡಾಂಗಣಗಳ ಸೌಲಭ್ಯಗಳನ್ನು ಮೇಲ್ದರ್ಜೆಗೇರಿಸುವುದು. | 25.00 | ಹಾಸನ |
| 4 | ಉಡುಪಿ | ಕಾರ್ಕಳ | ಕ್ರೀಡಾಂಗಣ ಅಭಿವೃದ್ಧಿ | 25.00 | ಕಾರ್ಕಳ |
| 5 | ಉಡುಪಿ | ಕುಂದಾಪುರ | ತಾಲ್ಲೂಕು ಕ್ರೀಡಾಂಗಣಕ್ಕೆ ರೂಫಿಂಗ್ ಅಳವಡಿಸುವುದು. | 35.00 | ಕುಂದಾಪುರ |
| 6 | ಶಿವಮೊಗ್ಗ | ಸಾಗರ | ಒಳಾಂಗಣ ಕ್ರೀಡಾಂಗಣದ ಹೆಚ್ಚುವರಿ ಕಾಮಗಾರಿ | 50.00 | ಸಾಗರ |
| 7 | ಉತ್ತರ ಕನ್ನಡ | ಶಿರಸಿ | ರನ್ನಿಂಗ್ ಟ್ರ್ಯಾಕ್ ಮತ್ತು ಚರಂಡಿ ನಿರ್ಮಾಣ | 40.00 | ಶಿರಸಿ |
| 8 | ಮಂಡ್ಯ | ಕೆ.ಆರ್.ಪೇಟೆ | ತಾಲ್ಲೂಕು ಕ್ರೀಡಾಂಗಣ ಅಭಿವೃದ್ಧಿ ಕಾಮಗಾರಿ ಹಾಗೂ ಒಳಾಂಗಣ ಕ್ರೀಡಾಂಗಣ ನಿರ್ಮಾಣ (DPR ಸಿದ್ಧಪಡಿಸಿದ ಬಾಬ್ತು ವೆಚ್ಚ ಮಾಡಲಾಗಿದೆ.) | 18.51 | ಕೆ.ಆರ್.ಪೇಟೆ |
| 9 | ಚಿಕ್ಕಮಗಳೂ | ಚಿಕ್ಕಮಗಳೂರು | ಜಿಲ್ಲಾ ಕ್ರೀಡಾಂಗಣ ಅಭಿವೃದ್ಧಿ ಕಾಮಗಾರಿ | 40.00 | ಚಿಕ್ಕಮಗಳೂರು |
| 10 | ಮಂಡ್ಯ | ಮಂಡ್ಯ | ಜಿಲ್ಲಾ ಕ್ರೀಡಾಂಗಣ ಅಭಿವೃದ್ಧಿ ಕಾಮಗಾರಿ (DPR ಸಿದ್ಧಪಡಿಸಿದ ಬಾಬ್ತು ವೆಚ್ಚ ಮಾಡಲಾಗಿದೆ.) | 13.05 | ಮಂಡ್ಯ |
| 11 | ಬೆಳಗಾವಿ | ಕಡೋಲಿ | ಕಾಂಪೌಂಡು ಗೋಡೆ ನಿರ್ಮಾಣ | 13.65 | ಬೆಳಗಾವಿ |
| 12 | ಬೆಂಗಳೂರು | ಆನೇಕಲ್ | ತಾಲ್ಲೂಕು ಕ್ರೀಡಾಂಗಣದ ಅಭಿವೃದ್ಧಿ | 25.00 | ಆನೇಕಲ್ |
| 13 | ಬೆಂಗಳೂರು | ವಿದ್ಯಾನಗರ | ಬಾಲಕಿಯರ ಕ್ರೀಡಾ ವಸತಿ ನಿಲಯ ನಿರ್ಮಾಣ | 150.00 | ಬ್ಯಾಟರಾಯನಪುರ |
| 14 | ಕೊಪ್ಪಳ | ಕುಕನೂರು | ತಾಲ್ಲೂಕು ಕ್ರೀಡಾಂಗಣದ ಜಮೀನು ಭೂ ಸ್ವಾಧೀನಪಡಿಸಿಕೊಳ್ಳಲು | 71.84 | ಕುಕನೂರು |
| 15 | ಬಾಗಲಕೋಟೆ | ಮುಧೋಳ | ತಾಲ್ಲೂಕಿನ ರನ್ನ ಕ್ರೀಡಾಂಗಣದಲ್ಲಿ ಒಳಾಂಗಣ ಕ್ರೀಡಾಂಗಣದ ನೆಲಮಹಡಿ ನಿರ್ಮಾಣ ಕಾಮಗಾರಿ | 50.00 | ಮುಧೋಳ |
| 16 | ಬೆಂಗಳೂರು | ಅಕ್ಕಿತಿಮ್ಮನಹಳ್ಳಿ | ಹಾಕಿ ಕ್ರೀಡಾಂಗಣ ಅಭಿವೃದ್ಧಿ ಕಾಮಗಾರಿ | 160.00 | ಶಾಂತಿನಗರ |
| 17 | ಬೆಂಗಳೂರು | ವಿದ್ಯಾನಗರ | ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರ ಆವರಣದ ಕಾಂಪೌಂಡು ಗೋಡೆ ಎತ್ತರಿಸುವುದು. | 5.60 | ಬ್ಯಾಟರಾಯನಪುರ |
| 18 | ಬೆಂಗಳೂರು | ವಿದ್ಯಾನಗರ | ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದ ಸುತ್ತಲೂ ಮಣ್ಣಿನ ರಸ್ತೆ ನಿರ್ಮಾಣ. | 19.50 | ಬ್ಯಾಟರಾಯನಪುರ |
| 19 | ಬೆಂಗಳೂರು | ವಿದ್ಯಾನಗರ | ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದಲ್ಲಿರುವ ವಿದ್ಯಾರ್ಥಿ ನಿಲಯಗಳ ನವೀಕರಣ ಕಾಮಗಾರಿ | 64.90 | ಬ್ಯಾಟರಾಯನಪುರ |
| 20 | ಬೆಂಗಳೂರು | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದಲ್ಲಿ ಕ್ರೀಡಾ ವಿಜ್ಞಾನ ಕೇಂದ್ರವನ್ನು ದುರಸ್ತಿ ಪಡಿಸುವುದು. | 20.00 | ಶಿವಾಜಿನಗರ |

## ಅನುಬಂಧ-2

2021-22ನೇ ಸಾಲಿನಲ್ಲಿ ವಿಧಾನಸಭಾ ಕ್ಷೇತ್ರವಾರು ಮೂಲಭೂತ ಸೌಕರ್ಯಕ್ಕೆ ಹಾಗೂ ನೂತನ ಕ್ರೀಡಾಂಗಣಗಳಿಗೆ ನೀಡಲಾದ ಅನುದಾನ (ರೂ ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ಕಾಮಗಾರಿ ವಿವರ | ಬಿಡುಗಡೆ ಮಾಡಿರುವ ಮೊತ್ತ | ವಿಧಾನ ಸಭಾ ಕ್ಷೇತ್ರ |
|---|---|---|---|---|---|
| 21 | ಬೆಂಗಳೂರು | ವಿದ್ಯಾನಗರ | ಜಯಪ್ರಕಾಶ ನಾರಾಯಣ ರಾಷ್ಟ್ರೀಯ ಯುವ ತರಬೇತಿ ಕೇಂದ್ರದಲ್ಲಿರುವ ಎಕ್ಸಲೆನ್ಸ್ ಕಟ್ಟಡದ ಮೇಲೆ ಹೊಸದಾಗಿ ಎರಡನೇ ಮಹಡಿ ನಿರ್ಮಾಣ. | 49.90 | ಬ್ಯಾಟರಾಯನಪುರ |
| 22 | ಬೆಂಗಳೂರು | ಬೆಂಗಳೂರು | ಶ್ರೀ ಕಂಠೀರವ ಕ್ರಿಡಾಂಗಣದಲ್ಲಿರುವ ವಾಲಿ ಬಾಲ್ ಅಂಕಣ ನವೀಕರಣ ಮಾಡುವುದು. | 10.00 | ಶಿವಾಜಿನಗರ |
| 23 | ಬೆಂಗಳೂರು | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದಲ್ಲಿ ಶೌಚಾಲಯ ಸಂಖ್ಯೆ: 39 ಅನ್ನು ನವೀಕರಿಸುವುದು. | 2.00 | ಶಿವಾಜಿನಗರ |
| 24 | ಬೆಂಗಳೂರು | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣದ ಸಿಂಥೆಟಿಕ್ ಅಥ್ಲೆಟಿಕ್ ಟ್ರ್ಯಾಕ್ ನ ಸಿವಿಲ್ ಕಾಮಗಾರಿ. | 5.66 | ಶಿವಾಜಿನಗರ |
| 25 | ಬೆಂಗಳೂರು | ಶ್ರೀ ಕಂಠೀರವ ಕ್ರೀಡಾಂಗಣ | ಸ್ಯಾಕ್ ಕಟ್ಟಡದ ಉಪಾಧ್ಯಕ್ಷರ ಕಛೇರಿಗೆ ಮತ್ತು ಅತಿಥಿ ಗೃಹ ಕಟ್ಟಡಗಳ ನವೀಕರಿಸುವ ಕಾಮಗಾರಿ | 20.00 | ಶಿವಾಜಿನಗರ |
| | | | **ಒಟ್ಟು** | **1338.24** | |

| 47 | Chincholi | PASTAPUR | PASTAPUR thanda | 2017-18 | RDWSD | No | MS Scientific Aqua O&M |
|---|---|---|---|---|---|---|---|
| 48 | Chincholi | Nidgunda | Nidgunda | 2015-16 | Co-operative | Yes | Society Maintenance |
| 49 | Chincholi | Degalmadi | Nimma Hosalli | 2016-17 | KRIDL | Yes | GP Maintenance |
| 50 | Chincholi | Salgar Basantpur | Paltya Tanda | 2016-17 | KRIDL | Yes | GP Maintenance |
| 51 | Chincholi | Polakapalli | Kalbhavi Tanda | 2014-15 | RDWSD | Yes | GP Maintenance |
| 52 | Chincholi | Ratkal | Hulsgud | 2014-15 | RDWSD | Yes | GP Maintenance |
| 53 | Chincholi | Ratkal | Ratkal | 2014-15 | RDWSD | Yes | GP Maintenance |
| 54 | Chincholi | Salgar Basanthpur | Salgar Basanthpur | 2016-17 | RDWSD | No | GP Maintenance |
| 55 | Chincholi | Shadipur | Shadipur | 2016-17 | RDWSD | Yes | GP Maintenance |
| 56 | Chincholi | Chandankera | Ranapur Tanda | 2016-17 | KRIDL | - | Work Not Done |
| 57 | Chincholi | Shirolli | Shirolli | 2014-15 | RDWSD | Yes | GP Maintenance |
| 58 | Chincholi | Venkatapur | Sangapur | 2017-18 | RDWSD | Yes | Aqua Plus Water Solutions O&M (Ravutappa) |
| 59 | Chincholi | SALEBEERAN AHALLI | Tumkunta | 2015-16 | Co-operative | Yes | Society Maintenance |
| 60 | Chincholi | Kodli | Seri Bada Tanda | 2016-17 | KRIDL | - | Work Not Done |
| 61 | Chincholi | Venkatapur | Srinagar Pedda Tanda | 2016-17 | KRIDL | - | Work Not Done |
| 62 | Chincholi | SULEPETH | SULEPETH | 2015-16 | Co-operative | No | Society Maintenance |
| 63 | Chincholi | Ainapur | Ainapur 1 | 2016-17 | KRIDL | No | GP Maintenance |
| 64 | Chincholi | Ainapur | Ainapur 2 | 2016-17 | KRIDL | No | GP Maintenance |
| 65 | Chincholi | Ainolli | Ainolli | 2016-17 | KRIDL | Yes | GP Maintenance |
| 66 | Chincholi | Anwar | Anwar | 2016-17 | KRIDL | No | GP Maintenance |
| 67 | Chincholi | Salgar Basanthpur | Benkepalli | 2016-17 | KRIDL | No | GP Maintenance |
| 68 | Chincholi | Chandankera | Chandankera | 2016-17 | KRIDL | Yes | GP Maintenance |
| 69 | Chincholi | Chengta | Chengta | 2016-17 | KRIDL | Yes | GP Maintenance |
| 70 | Chincholi | Chimanchod | Chimanchod | 2016-17 | KRIDL | No | GP Maintenance |
| 71 | Chincholi | Kanakpur | Dotikolla | 2016-17 | KRIDL | Yes | GP Maintenance |
| 72 | Chincholi | Gadikeshwar | Gadikeshwar | 2016-17 | KRIDL | No | GP Maintenance |
| 73 | Chincholi | Hasargundgi | Hasargundgi | 2016-17 | KRIDL | Yes | GP Maintenance |
| 74 | Chincholi | Kanakpur | Kanakpur | 2016-17 | KRIDL | Yes | GP Maintenance |
| 75 | Chincholi | Ainapur | Khanapur | 2016-17 | KRIDL | Yes | GP Maintenance |
| 76 | Chincholi | Kodli | Kodli | 2016-17 | KRIDL | No | Repair Problem |
| 77 | Chincholi | Nagaidali | Kollur | 2016-17 | KRIDL | Yes | GP Maintenance |
| 78 | Chincholi | HODEBEERN ALLI | Korvi | 2016-17 | KRIDL | No | GP Maintenance |
| 79 | Chincholi | Kunchawaram 1 | Kunchawaram 1 | 2016-17 | KRIDL | Yes | GP Maintenance |
| 80 | Chincholi | Kunchawaram 2 | Kunchawaram 2 | 2016-17 | KRIDL | Yes | GP Maintenance |
| 81 | Chincholi | Mogha 1 | Mogha 1 | 2016-17 | KRIDL | No | GP Maintenance |
| 82 | Chincholi | Mogha 2 | Mogha 2 | 2016-17 | KRIDL | No | Repair Problem |
| 83 | Chincholi | Nagaidlai | Nagaidlai Tanda | 2016-17 | KRIDL | Yes | GP Maintenance |
| 84 | Chincholi | Nidgunda | Nidgunda | 2016-17 | KRIDL | Yes | GP Maintenance |
| 85 | Chincholi | Polakpalli | Polakpalli | 2016-17 | KRIDL | Yes | GP Maintenance |
| 86 | Chincholi | Ratkal | Ratkal | 2016-17 | KRIDL | Yes | GP Maintenance |
| 87 | Chincholi | Rummangud | Rumgod | 2016-17 | KRIDL | No | GP Maintenance |
| 88 | Chincholi | Rummangud | Rumgod Tanda | 2016-17 | KRIDL | No | GP Maintenance |
| 89 | Chincholi | Rumungud | Rumungud | 2016-17 | KRIDL | No | GP Maintenance |
| 90 | Chincholi | Salgar Basantpur | Salgar Basantpur | 2016-17 | KRIDL | No | GP Maintenance |
| 91 | Chincholi | Venkatapur | Sangapur | 2016-17 | KRIDL | Yes | GP Maintenance |
| 92 | Chincholi | Shadipur | Shadipur | 2016-17 | KRIDL | Yes | GP Maintenance |
| 93 | Chincholi | Sulepeth | Sulepeth | 2016-17 | KRIDL | No | GP Maintenance |
| 94 | Chincholi | Venktapur | Venktapur | 2016-17 | KRIDL | No | GP Maintenance |
| 95 | Chincholi | Hasargundgi | Yetebarpur | 2016-17 | KRIDL | Yes | GP Maintenance |
| 96 | Kalagi | Kalgi-1 | Kalgi-1 | 2016-17 | KRIDL | Yes | GP Maintenance |
| 97 | Kalagi | Kalgi | Kalagi | 2013-14 | RDWSD | Yes | M/s MS Scientific Aqua O&M |
| 98 | Kalagi | Arnakal | Arnakal | 2016-17 | KRIDL | No | GP Maintenance |
| 99 | Kalagi | Kodadur | Kodadur | 2016-17 | KRIDL | No | Repair Problem |
| 100 | Kalagi | Badasoor | Badasoor | 2014-15 | RDWSD | Yes | GP Maintenance |
| 101 | Kalagi | Badasoor | Bedasur K Tanda | 2017-18 | RDWSD | No | MS Scientific Aqua O&M |
| 102 | Kalagi | Arankal-1 | Arankal-1 | 2016-17 | KRIDL | No | Repair Problem |

| | | | | | | | |
|---|---|---|---|---|---|---|---|
| 103 | Kalagi | Kodadoor | Kodadoor | 2016-17 | KRIDL | No | Scrap |
| 104 | Kalagi | Kodadoor | Mangalgi-2 | 2016-17 | KRIDL | No | Scrap |
| 105 | Kalagi | Rajapur | Bhartanoor | 2017-18 | RDWSD | Yes | MS Scientific Aqua O&M |
| 106 | Kalagi | Chincholi.H | Chincholi.H | 2017-18 | RDWSD | No | MS Scientific Aqua O&M |
| 107 | Kalagi | Hadnoor | Hadnoor Tanda | 2017-18 | RDWSD | Yes | MS Scientific Aqua O&M |
| 108 | Kalagi | Hebbal | Hebbal | 2014-15 | RDWSD | Yes | GP Maintenance |
| 109 | Kalagi | Kadaboor | Sugur (N) | 2011-12 | RDWSD | Yes | Water Life O&M |
| 110 | Kalagi | Kodadoor | Kodadoor | 2017-18 | RDWSD | Yes | Aquashine Technologies(Rakshith MD) |
| 111 | Kalagi | Madbul | Muguta | 2014-15 | RDWSD | No | Eureka Forbes O&M |
| 112 | Kalagi | kodadur | kodadur(Mangalgi) | 2015-16 | Co-operative | No | Society Maintenance |
| 113 | Kalagi | Madbul | Wacca | 2015-16 | Others (jalamrit scheme) | Yes | GP Maintenance |
| 114 | Kalagi | Tengli | Arajambaga | 2014-15 | RDWSD | Yes | Eureka Forbes O&M |
| 115 | Kalagi | Rajapur | Salhalli | 2016-17 | KRIDL | No | Repair Problem |
| 116 | Kalagi | Kodadur | Mangalgi-1 | 2016-17 | KRIDL | No | Repair Problem |
| 117 | Kalagi | Bedsoor | Bedsoor | 2016-17 | KRIDL | No | GP Maintenance |
| 118 | Kalagi | Tengli | Tengli | 2016-17 | KRIDL | No | Repair Problem |
| 119 | Kalagi | Chincholi H | chincholi.h-2 | 2016-17 | KRIDL | No | GP Maintenance |
| 120 | Kalagi | Arankal | Arankal | 2015-16 | Co-operative | Yes | Society Maintenance |
| 121 | Kalagi | Gotur | Gotur | 2016-17 | KRIDL | Yes | GP Maintenance |
| 122 | Kalagi | Kandgol | Hulgera | 2016-17 | KRIDL | No | GP Maintenance |
| 123 | Kalagi | Shellagi | Kalhipperga | 2016-17 | KRIDL | Yes | GP Maintenance |
| 124 | Kalagi | Rajapur | Rajapur | 2016-17 | KRIDL | No | GP Maintenance |
| 125 | Kalagi | Shellgi | Shellgi | 2016-17 | KRIDL | No | GP Maintenance |
| 126 | Kalagi | Kandgool | Kandgool | 2016-17 | KRIDL | Yes | GP Maintenance |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 346

ವಿಧಾನ ಸಭೆಯ ಸದಸ್ಯರ ಹೆಸರು : ಡಾ.ಅವಿನಾಶ್ ಉುಮೇಶ್ ಜಾಧವ್(ಚಿಂಚೋಳಿ)

ಉತ್ತರಿಸಬೇಕಾದ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತುಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 16.02.2022

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಿಂಚೋಳಿ ತಾಲ್ಲೂಕಿನ ಕೊಂಚಾವರಂ ಗ್ರಾಮದಲ್ಲಿ 2ಎಕರೆ ಜಮೀನಿನಲ್ಲಿ ಜೇನು ಸಾಕಾಣಿಕೆಗಾಗಿ ಮಧುವನ ಇರುವುದು ಸರ್ಕಾರದ ಗಮನದಲ್ಲಿದೆಯೆ; ಹಾಗಿದ್ದಲ್ಲಿ ಮಧುವನ ಸಂಪೂರ್ಣವಾಗಿ ಹಾಳು ಬಿದ್ದಿರುವುದು ನಿಜವಲ್ಲವೇ; ಈ ಬಗ್ಗೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ? | ಚಿಂಚೋಳಿ ತಾಲ್ಲೂಕಿನ ಕೊಂಚಾವರಂ ಗ್ರಾಮದಲ್ಲಿ 1ಎಕರೆ ಜಮೀನಿನಲ್ಲಿ ಜೇನು ಸಾಕಾಣಿಕೆಗಾಗಿ ಮಧುವನ ಇರುತ್ತದೆ. ಈ ಮಧುವನವು ಕಲ್ಲು ಪ್ರದೇಶವಾಗಿದ್ದು ನೀರಿನ ಕೊರತೆಯಿರುತ್ತದೆ.<br><br>ಈಪ್ರದೇಶವನ್ನು ಸೂಕ್ತ ರೀತಿಯಲ್ಲಿ ಅಭಿವೃದ್ಧಿಪಡಿಸಲು ಯೋಜಿಸಲಾಗುತ್ತಿದೆ |

**No. HORTI 60 HGM 2022**

(ಮುನಿರತ್ನ)
ತೋಟಗಾರಿಕೆ ಹಾಗೂ ಯೋಜನೆ
ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 347 |
| ಸದಸ್ಯರ ಹೆಸರು | : | ಡಾ|| ಅವಿನಾಶ್ ಉಮೇಶ್ ಜಾಧವ್ (ಚಿಂಚೋಳಿ) |
| ಉತ್ತರಿಸುವ ದಿನಾಂಕ | : | 16-02-2022 |
| ಉತ್ತರಿಸುವ ಸಚಿವರು | : | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ಇಲಾಖೆಯ ವತಿಯಿಂದ ಕೈಗೊಳ್ಳುತ್ತಿರುವ ವಿವಿಧ ಯೋಜನೆಗಳು ಯಾವುವು; ಹಾಗಿದ್ದಲ್ಲಿ, ಈ ಯೋಜನೆಗಳ ಅಡಿಯಲ್ಲಿ ರೈತರಿಗೆ ದೊರೆಯುವ ಸೌಲಭ್ಯಗಳೇನು; ಯಾವ ಯಾವ ಯೋಜನೆಯಡಿಯಲ್ಲಿ ರೈತರಿಗೆ ಸಹಾಯಧನ ನೀಡಲಾಗುತ್ತಿದೆ; | ಕೃಷಿ ಇಲಾಖೆಯ ವತಿಯಿಂದ ಕೈಗೊಳ್ಳುತ್ತಿರುವ ವಿವಿಧ ಯೋಜನೆಗಳು, ರೈತರಿಗೆ ದೊರೆಯುವ ಸೌಲಭ್ಯಗಳು ಹಾಗೂ ಸಹಾಯಧನದ ವಿವರಗಳನ್ನು ಅನುಬಂಧ-1ರಲ್ಲಿ ಹಾಗೂ ಜಲಾನಯನ ಅಭಿವೃದ್ಧಿ ಇಲಾಖೆಯ ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ. |
| ಆ) | ಚಿಂಚೋಳಿ ಮತಕ್ಷೇತ್ರ ವ್ಯಾಪ್ತಿಯಲ್ಲಿ ಕೃಷಿ ಅಧಿಕಾರಿ ಹುದ್ದೆಗಳು ಖಾಲಿಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಹಾಗಿದ್ದಲ್ಲಿ ಇದರಿಂದ ರೈತರಿಗೆ ಸೌಲಭ್ಯಗಳನ್ನು ನೀಡುವುದರಲ್ಲಿ ವಿಳಂಬವಾಗುತ್ತಿರುವುದನ್ನು ತಪ್ಪಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಕೃಷಿ ಇಲಾಖೆಯಲ್ಲಿ ಸಹಾಯಕ ಕೃಷಿ ಅಧಿಕಾರಿಗಳ ಮತ್ತು ಕೃಷಿ ಅಧಿಕಾರಿಗಳ ಹಾಗೂ ಇತರೆ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿ ಇರುವುದರಿಂದ ರೈತರ ಕೆಲಸ ಕಾರ್ಯಗಳಿಗೆ ತೊಂದರೆಯಾಗಿರುವುದು ಗಮನಕ್ಕೆ ಬಂದಿದೆ.<br>ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಈ ಹುದ್ದೆಗಳನ್ನು ಭರ್ತಿ ಮಾಡಲು ನೇರ ನೇಮಕಾತಿ ಹಾಗೂ ಮುಂಬಡ್ತಿ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗಿದೆ ಹಾಗೂ "ಬಿ" ವೃಂದದ ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಹಾಗೂ ಗ್ರೂಪ್ "ಸಿ" ವೃಂದದ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.<br>ರೈತರಿಗೆ ಸಮರ್ಪಕ ಮಾಹಿತಿ ನೀಡಲು ಮತ್ತು ಇಲಾಖಾ ಸವಲತ್ತುಗಳನ್ನು ವಿತರಣೆ ಮಾಡುವಲ್ಲಿ ನೌಕರರ ಕೊರತೆ ನೀಗಿಸಲು ಎಲ್ಲಾ ರೈತ ಸಂಪರ್ಕ ಕೇಂದ್ರಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ಅಕೌಂಟೆಂಟ್‌ಗಳನ್ನು ನೇಮಿಸಿಕೊಳ್ಳಲಾಗಿದೆ. ರೈತರಿಗೆ ಮಾರ್ಗದರ್ಶನ |

| | | ನೀಡಲು ATMA (Agriculture technology Management Agency) ಯೋಜನೆಯಡಿ ಹೊರಗುತ್ತಿಗೆ ಆಧಾರದಲ್ಲಿ ತಾಂತ್ರಿಕ ಮಾರ್ಗದರ್ಶನ ನೀಡುವ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ATMಗಳನ್ನು (ಸಹಾಯಕ ತಾಂತ್ರಿಕ ವ್ಯವಸ್ಥಾಪಕರು) ಹೋಬಳಿ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ BTM (ಬ್ಲಾಕ್ ತಾಂತ್ರಿಕ ವ್ಯವಸ್ಥಾಪಕರು) ಹಾಗೂ ಜಿಲ್ಲಾ ಮಟ್ಟದಲ್ಲಿ DPDಗಳನ್ನು (ಉಪ ಯೋಜನಾ ನಿರ್ದೇಶಕರು) ನೇಮಿಸಿಕೊಳ್ಳಲಾಗಿದೆ. |
|---|---|---|
| ಇ) | ಚಿಂಚೋಳಿ ಮತಕ್ಷೇತ್ರ ವ್ಯಾಪ್ತಿಯಲ್ಲಿ ಕುಂಚಾವರಂ, ಕನಕಪೂರ ಹಾಗೂ ಐನಾಪೂರ ಗ್ರಾಮಗಳಲ್ಲಿ ಹೊಸ ರೈತ ಸಂಪರ್ಕ ಕೇಂದ್ರಗಳಿಗೆ ರೈತರಿಂದ ಬಹುದಿನಗಳ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಚಿಂಚೋಳಿ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಕುಂಚಾವರಂ ಗ್ರಾಮವು ಚಿಂಚೋಳಿ ಹೋಬಳಿ ವ್ಯಾಪ್ತಿಯಲ್ಲಿ ಬರುತ್ತಿದ್ದು ಪ್ರಸ್ತುತ ಚಿಂಚೋಳಿ ಹೋಬಳಿಯಲ್ಲಿ ರೈತ ಸಂಪರ್ಕ ಕೇಂದ್ರವು ಕಾರ್ಯನಿರ್ವಹಿಸುತ್ತಿದೆ. ಕನಕಪೂರ ಗ್ರಾಮವು ಕೋಡ್ಲಿ ಹೋಬಳಿ ವ್ಯಾಪ್ತಿಯಲ್ಲಿ ಬರುತ್ತಿದ್ದು ಪ್ರಸ್ತುತ ಕೋಡ್ಲಿ ಹೋಬಳಿಯಲ್ಲಿ ರೈತ ಸಂಪರ್ಕ ಕೇಂದ್ರವು ಕಾರ್ಯನಿರ್ವಹಿಸುತ್ತಿದೆ. ಸುಮಾರು 15 ವರ್ಷಗಳ ಹಿಂದೆ ಐನಾಪೂರ ಗ್ರಾಮಕ್ಕೆ ಹೊಸ ರೈತ ಸಂಪರ್ಕ ಕೇಂದ್ರ ನಿರ್ಮಿಸಲು ಮಂಜೂರಾತಿ ಸಿಕ್ಕಿತ್ತು. ಆದರೆ ಆ ದಿನಗಳಲ್ಲಿ ಕಾರಣಾಂತರದಿಂದ ಸದರಿ ರೈತ ಸಂಪರ್ಕ ಕೇಂದ್ರವನ್ನು ಚಿಮ್ಮನಚೋಡ ಗ್ರಾಮಕ್ಕೆ ವರ್ಗಾಯಿಸಲಾಗಿದ್ದು, ಚಿಮ್ಮನಚೋಡ ಗ್ರಾಮದಲ್ಲಿ ಐನಾಪುರ ಹೋಬಳಿಯ ರೈತ ಸಂಪರ್ಕ ಕೇಂದ್ರ ಕಾರ್ಯನಿರ್ವಹಿಸುತ್ತಿದೆ.<br>ಸರ್ಕಾರಿ ಆದೇಶ ಸಂಖ್ಯೆ: ಕೃತೋಇ 239 ಕೃಯೋಕಾ 99 ದಿ:29.06.2000 ರಂತೆ ಹೋಬಳಿಗೊಂದು ರೈತ ಸಂಪರ್ಕ ಕೇಂದ್ರ ಸ್ಥಾಪಿಸಲು ಅವಕಾಶವಿದ್ದು, ಪ್ರತಿ ಹೋಬಳಿಯಲ್ಲಿ ರೈತ ಸಂಪರ್ಕ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. |

ಸಂಖ್ಯೆ: AGRI-AML/42/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 347 ರ ಅನುಬಂಧ-1

**ಕೃಷಿ ಇಲಾಖೆಯ ವತಿಯಿಂದ ಕೈಗೊಳ್ಳುತ್ತಿರುವ ವಿವಿಧ ಯೋಜನೆಗಳ ಹಾಗೂ ಸದರಿ ಯೋಜನೆಗಳಲ್ಲಿ ರೈತರಿಗೆ ನೀಡಲಾಗುತ್ತಿರುವ ಸಹಾಯಧನದ (ಸಬ್ಸಿಡಿ) ವಿವರಗಳು**

| ಕ್ರ. ಸಂ | ಫಲಾನುಭವಿ ಆಧಾರಿತ ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 1. | ಬಿತ್ತನೆ ಬೀಜಗಳ ಪೂರೈಕೆ | ಈ ಯೋಜನೆಯಡಿ ಸಾಮಾನ್ಯ ವರ್ಗದ ರೈತರಿಗೆ ಶೇ. 50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75 ರ ರಿಯಾಯಿತಿ ದರದಲ್ಲಿ ವಿವಿಧ ಬೆಳೆಗಳ ಪ್ರಮಾಣಿತ/ ನಿಜ ಚೀಟಿ ಬಿತ್ತನೆ ಬೀಜಗಳನ್ನು ಒಟ್ಟಾರೆ ಗರಿಷ್ಟ 2.00 ಹೆಕ್ಟೇರ್ ಅಥವಾ ಅವರ ವಾಸ್ತವಿಕ ಹಿಡುವಳಿ (Actual holding) ಯಾವುದು ಕಡಿಮೆಯೋ ಆ ವಿಸ್ತೀರ್ಣಕ್ಕೆ ಮಾತ್ರ ವಿತರಣೆ ಮಾಡಲಾಗುತ್ತಿದೆ. |
| 2. | ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆ | ಈ ಯೋಜನೆಯಡಿ ಪ್ರಕೃತಿ ವಿಕೋಪಗಳು, ಕೀಟಗಳು ಮತ್ತು ರೋಗಗಳಿಂದಾಗಿ ಯಾವುದೇ ಅಧಿಸೂಚಿತ ಬೆಳೆ ವಿಫಲವಾದ ಪಕ್ಷದಲ್ಲಿ ರೈತರಿಗೆ ವಿಮಾ ರಕ್ಷಣೆ ಮತ್ತು ಹಣಕಾಸು ಬೆಂಬಲ ನೀಡಲಾಗುವುದು. ರೈತರಿಗೆ ನೀಡುವ ವಿಮಾ ಕಂತಿನ ರಿಯಾಯಿತಿಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ನೀಡಿ ಬೆಳೆ ವಿಮಾ ನಷ್ಟ ಪರಿಹಾರವನ್ನು ಇತ್ಯರ್ಥಪಡಿಸಲು ಅನುವು ಮಾಡಲಾಗುವುದು. |
| 3. | ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆ (PMKISAN) | ಭಾರತ ಸರ್ಕಾರದ ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆಯಡಿ ಸಾಗುವಳಿ ಭೂಮಿ ಹೊಂದಿರುವ ಎಲ್ಲಾ ಅರ್ಹ ರೈತರಿಗೆ ವಾರ್ಷಿಕ ರೂ.6000/-ಗಳ ನಗದನ್ನು ರೂ.2000/-ಗಳಂತೆ ಮೂರು ಕಂತುಗಳಲ್ಲಿ ನೇರ ನಗದು ವರ್ಗಾವಣೆ ಮೂಲಕ ನಾಲ್ಕು ತಿಂಗಳಿಗೊಮ್ಮೆ ನೀಡಲಾಗುವುದು. |
| 4. | ಸಾವಯವ ಕೃಷಿ | ಸಾವಯವ ಕೃಷಿ ಅಳವಡಿಕೆ ಮತ್ತು ದೃಡೀಕರಣ ಕಾರ್ಯಕ್ರಮದಡಿ ರಾಜ್ಯದ ಸಾವಯವ ಪ್ರಮಾಣೀಕೃತ ಪ್ರದೇಶವನ್ನು ವಿಸ್ತರಿಸುವ ನಿಟ್ಟಿನಲ್ಲಿ ಆಸಕ್ತ ಗುಂಪು ಮತ್ತು ವ್ಯಕ್ತಿಗತ ಪ್ರಸ್ತಾವನೆಗಳ ಪ್ರಮಾಣೀಕರಣಕ್ಕಾಗಿ ಅನುದಾನ ಬಳಕೆ ಮಾಡಲಾಗುತ್ತಿದೆ. |
| 5. | ರೈತ ಸಿರಿ | ಸಿರಿಧಾನ್ಯಗಳಾದ ನವಣೆ, ಹಾರಕ, ಸಾಮೆ, ಕೊರಲೆ, ಊದಲು ಬೆಳೆಗಳನ್ನು ಬೆಳೆದ ಎಲ್ಲಾ ವರ್ಗದ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.10,000/-ದಂತೆ ಗರಿಷ್ಠ ಎರಡು ಹೆಕ್ಟೇರುಗಳಿಗೆ ಪ್ರೋತ್ಸಾಹಧನವನ್ನು ಫಲಾನುಭವಿಗಳಿಗೆ ನೇರ ನಗದು ವರ್ಗಾವಣೆ ಮೂಲಕ ನೀಡಲಾಗುವುದು. ಸಿರಿಧಾನ್ಯಗಳನ್ನು ಬೆಳೆದ ರೈತರುಗಳಿಗೆ ಬೆಳೆ ಸಮೀಕ್ಷೆ ಆಧಾರದಂತೆ ಪ್ರೋತ್ಸಾಹಧನವನ್ನು ವಿತರಿಸಲಾಗುತ್ತಿದೆ. |

| 6. | ಸೂಕ್ಷ್ಮ ನೀರಾವರಿ | ಹನಿ / ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಎಲ್ಲಾ ವರ್ಗದ ರೈತರಿಗೆ ಶೇ.90 ರಷ್ಟು ಸಹಾಯಧನ (2.00 ಹೆಕ್ಟೇರ್ ವರೆಗೆ) ಒದಗಿಸಲಾಗುತ್ತಿದೆ. |
|---|---|---|
| 7. | ಕೃಷಿ ಯಾಂತ್ರೀಕರಣ ಹಾಗೂ ಕೃಷಿ ಉತ್ಪನ್ನಗಳ ಸಂಸ್ಕರಣೆ | ಸಣ್ಣ ಟ್ರ್ಯಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ನಾಟಿ / ಬಿತ್ತನೆ ಉಪಕರಣಗಳು, ಟ್ರ್ಯಾಕ್ಟರ್ / ಶಕ್ತಿಚಾಲಿತ ಸಸ್ಯ ಸಂರಕ್ಷಣಾ ಉಪಕರಣಗಳು, ಅಂತರ ಬೇಸಾಯ ಉಪಕರಣಗಳು, ತ್ಯಾಜ್ಯ ವಸ್ತುಗಳ ನಿರ್ವಹಣಾ ಉಪಕರಣಗಳು, ಕೊಯಿಲು ಮತ್ತು ಒಕ್ಕಣೆ ಮಾಡುವ ಉಪಕರಣಗಳು ಕೃಷಿ ಸಂಸ್ಕರಣಾ ಘಟಕಗಳು ಹಾಗೂ ಡೀಸಲ್ ಪಂಪ್ ಸೆಟ್‌ಗಳನ್ನು ಸಾಮಾನ್ಯ ರೈತರಿಗೆ ಶೇ.50 ರಷ್ಟು ಸಹಾಯಧನ ಹಾಗು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.90 ರಷ್ಟು ಸಹಾಯಧನವನ್ನು ಗರಿಷ್ಠ ಮಿತಿ ರೂ. ಒಂದು ಲಕ್ಷದವರೆಗೆ ನೀಡಲಾಗುತ್ತಿದೆ. ಸಣ್ಣ ಟ್ರ್ಯಾಕ್ಟರ್‌ಗಳ ಖರೀದಿಗೆ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ರೂ.3.00ಲಕ್ಷ ಹಾಗು ಸಾಮಾನ್ಯ ರೈತರಿಗೆ ರೂ.0.75ಲಕ್ಷಗಳಂತೆ ಗರಿಷ್ಠ ಸಹಾಯಧನವನ್ನು ನೀಡಲಾಗುತ್ತಿದೆ. |
| 8. | ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನ | ಈ ಯೋಜನೆಯಡಿ ಬತ್ತ, ದ್ವಿದಳಧಾನ್ಯ, ನೂಟ್ರಿ ಸಿರಿಧಾನ್ಯ, ಎಣ್ಣೆಕಾಳು, ಕಬ್ಬು ಮತ್ತು ಹತ್ತಿ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ಆಧುನಿಕ ತಾಂತ್ರಿಕತೆಗಳ ಗುಚ್ಛ ಪ್ರಾತ್ಯಕ್ಷಿಕೆಗಳನ್ನು ಆಯೋಜಿಸುವುದರ ಜೊತೆಗೆ ಬಿತ್ತನೆ ಬೀಜ, ಲಘುಪೋಷಕಾಂಶಗಳು, ಜೈವಿಕ ಗೊಬ್ಬರಗಳು, ಸಸ್ಯ ಸಂರಕ್ಷಣಾ ರಾಸಾಯನಿಕಗಳು, ಜಿಪ್ಸಂ/ ಕೃಷಿ ಸುಣ್ಣ, ಕೃಷಿ ಉಪಕರಣಗಳು, ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಶೇ.50ರ ಸಹಾಯಧನವನ್ನು ನೀಡಲಾಗುತ್ತಿದೆ. |
| 9. | ಸಸ್ಯ ಸಂರಕ್ಷಣೆ | ಶೇ.50ರ ರಿಯಾಯಿತಿಯಲ್ಲಿ ಸಸ್ಯ ಸಂರಕ್ಷಣಾ ಪೀಡೆನಾಶಕಗಳನ್ನು ವಿತರಣೆ ಮಾಡಲಾಗುತ್ತಿದೆ. |
| 10. | ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ | ಎರೆಹುಳು ಗೊಬ್ಬರ, ಸಾವಯವ ಗೊಬ್ಬರ, ರಂಜಕಯುಕ್ತ ಸಾವಯವ ಗೊಬ್ಬರ, ಸಿಟಿ ಕಾಂಪೋಸ್ಟ್ ರಿಯಾಯತಿ ದರದಲ್ಲಿ ವಿತರಣೆ ಮಾಡುವುದು. ಸಾಮಾನ್ಯ ವರ್ಗದ ರೈತರಿಗೆ ಶೇ.50ರ ಸಹಾಯಧನ ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನ ನೀಡಲಾಗುತ್ತಿದೆ. |
| 11. | ಸಾವಯವ ಇಂಗಾಲ ಹೆಚ್ಚಿಸುವ ಅಭಿಯಾನ | ವಿವಿಧ ದ್ವಿದಳ ಧಾನ್ಯ ಬೀಜಗಳು ಮತ್ತು ಹಸಿರೆಲೆ /ಗೊಬ್ಬರ ಬೀಜಗಳನ್ನು ಸಾಮಾನ್ಯ ವರ್ಗ ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನ ನೀಡಲಾಗುತ್ತಿದೆ. |
| 12. | ಕೃಷಿ ವಿಸ್ತರಣಾ ಉಪ ಅಭಿಯಾನ (SAME-ATMA) | ಯೋಜನೆಯಡಿ ಆಯೋಜಿಸುವ ವಿಸ್ತರಣಾ ಕಾರ್ಯಕ್ರಮಗಳ ಚಟುವಟಿಕೆಗಳಲ್ಲಿ ಎಲ್ಲಾ ವರ್ಗದ ರೈತರು / ರೈತ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಅವಕಾಶ ಕಲ್ಪಿಸಲಾಗಿದೆ. |

| 13. | ಮಣ್ಣಿನ ಫಲವತ್ತತೆ ಯೋಜನೆ | ಮಣ್ಣು ಆರೋಗ್ಯ ಚೀಟಿ ಶಿಫಾರಸ್ಸಿನ ಅನ್ವಯ ಪ್ರಾತ್ಯಕ್ಷಿಕೆಗಳನ್ನು ಕೈಗೊಳ್ಳಲು ರಿಯಾಯಿತಿ ದರದಲ್ಲಿ ರಸಗೊಬ್ಬರ, ಸಾವಯವ ಗೊಬ್ಬರ, ಜೈವಿಕ ಗೊಬ್ಬರ, ಲಘುಪೋಷಕಾಂಶ ಮಣ್ಣು ಸುಧಾರಕಗಳನ್ನು ಪ್ರತಿ ಹೆಕ್ಟೇರಿಗೆ ಗರಿಷ್ಟ ರೂ.2500/- ಸಹಾಯಧನ ನೀಡಲಾಗುತ್ತಿದೆ. |
|---|---|---|

## ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:347ಕ್ಕೆ ಅನುಬಂಧ-2

**ಜಲಾನಯನ ಅಭಿವೃದ್ಧಿ ಇಲಾಖೆಯಿಂದ ಕೈಗೊಳ್ಳುತ್ತಿರುವ ವಿವಿಧ ಯೋಜನೆಗಳ ಹಾಗೂ ಸದರಿ ಯೋಜನೆಗಳಲ್ಲಿ ರೈತರಿಗೆ ನೀಡಲಾಗುತ್ತಿರುವ ಸಹಾಯಧನ ವಿವರಗಳು:**

1) **ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (PMKSY):** ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು 60:40ರ ಅನುಪಾತದಲ್ಲಿ ಅನುದಾನ ಒದಗಿಸಲಾಗುತ್ತಿದೆ.

**ಅ) ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ–ಜಲಾನಯನ ಅಭಿವೃದ್ಧಿ ಘಟಕ (PMKSY-WDC):** ಈ ಯೋಜನೆ ಮೂಲಕ ಮಣ್ಣು ಮತ್ತು ನೀರು ಸಂರಕ್ಷಣೆಗಾಗಿ ಕಂದಕ ಬದುಗಳು, ಬೋಲ್ಡರ್/ರಬಲ್/ಸಸ್ಯತಡೆಗಳು, ಕೃಷಿ ಹೊಂಡಗಳು, ಚಿಕ್ಕ ತಡೆ ಅಣೆಗಳು, ನಾಲಾಬದುಗಳು, ಖುಷ್ಕಿ ತೋಟಗಾರಿಕೆ, ಕೃಷಿ ಅರಣ್ಯ ಮತ್ತು ಮೇವು ಅಭಿವೃದ್ಧಿ ಮುಂತಾದ ಚಟುವಟಿಕೆಗಳನ್ನು ತಾಂತ್ರಿಕತೆ ಆಧರಿಸಿ ಅನುಷ್ಠಾನ ಮಾಡಲಾಗುತ್ತದೆ. ಈ ಚಟುವಟಿಕೆಗಳಿಂದ ಮಣ್ಣು ಮತ್ತು ನೀರಿನ ಸಂರಕ್ಷಣೆಯಾಗಿ ಬೆಳೆಗಳ ಉತ್ಪಾದಕತೆಯು ಹೆಚ್ಚಾಗುತ್ತದೆ.

ಯೋಜನಾ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳಲ್ಲಿ ಭೂ ರಹಿತ ಮತ್ತು ಆರ್ಥಿಕವಾಗಿ ಹಿಂದುಳಿದ ಕುಟುಂಬಗಳ ಮಹಿಳೆಯರಿಗಾಗಿ ಸ್ವಸಹಾಯ ಗುಂಪುಗಳನ್ನು ರಚಿಸಲಾಗುತ್ತದೆ. ಸ್ವಸಹಾಯ ಗುಂಪಿನ ಸದಸ್ಯರಿಗೆ ಅಗತ್ಯ ತರಬೇತಿಗಳನ್ನು ನೀಡಿ ಆದಾಯ ಉತ್ಪನ್ನ ಚಟುವಟಿಕೆಗಳನ್ನು ಕೈಗೊಳ್ಳಲು ಸುತ್ತು ನಿಧಿಯನ್ನು ನೀಡಿ ಪ್ರೋತ್ಸಾಹ ನೀಡಲಾಗುತ್ತಿದೆ.

**ಆ) ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಇತರೆ ಉಪಚಾರಗಳು(PMKSY-OI):** ಈ ಯೋಜನೆಯಡಿ ಸಮುದಾಯ ನೀರು ಸಂಗ್ರಹಣಾ ವಿನ್ಯಾಸಗಳಾದ ತಡೆಅಣೆ, ನಾಲಾಬದು, ಕಿಂಡಿ ಅಣೆ, ಜಿನುಗುಕೆರೆ ಮತ್ತಿತರ ನೀರು ಸಂಗ್ರಹಣಾ ವಿನ್ಯಾಸಗಳನ್ನು ರಚಿಸಿ, ಸದರಿ ವಿನ್ಯಾಸಗಳನ್ನು ಸೂಕ್ಷ್ಮ ನೀರಾವರಿಗೆ ಅಳವಡಿಸುವುದರ ಮೂಲಕ ಬೆಳೆಗಳ ಸಂದಿಗ್ಧ ಪರಿಸ್ಥಿತಿಯಲ್ಲಿ ರಕ್ಷಣಾತ್ಮಕ ನೀರಾವರಿಗೆ ನೀರನ್ನು ಬಳಸಿ ಕೃಷಿ ಉತ್ಪನ್ನಗಳ ಉತ್ಪಾದನೆಯನ್ನು ಹೆಚ್ಚಿಸಲು ನೆರವಾಗುತ್ತದೆ.

2. **ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ-ಮಳೆಯಾಶ್ರಿತ ಪ್ರದೇಶಾಭಿವೃದ್ಧಿ ಕಾರ್ಯಕ್ರಮ (NMSA-RAD ):**

ಈ ಕಾರ್ಯಕ್ರಮವನ್ನು ಮಳೆಯಾಶ್ರಿತ ಪ್ರದೇಶಗಳಲ್ಲಿ ಕನಿಷ್ಠ 100 ಹೆಕ್ಟೇರ್ ಪ್ರದೇಶದಲ್ಲಿ ಆಯ್ದ ಗುಚ್ಛ ಗ್ರಾಮಗಳಲ್ಲಿ ಅನುಷ್ಠಾನಗೊಳಿಸಲಾಗಿದೆ. ಈ ಕಾರ್ಯಕ್ರಮದಡಿ ಮಳೆಯಾಶ್ರಿತ ಪ್ರದೇಶಗಳಲ್ಲಿ ಸಮಗ್ರ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹ ನೀಡುತ್ತದೆ. ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಕೃಷಿ ಅರಣ್ಯ ಆಧಾರಿತ ಮಿಶ್ರ ಬೆಳೆ ಪದ್ಧತಿಗಳನ್ನು ಒಬ್ಬ ಫಲಾನುಭವಿಗೆ ಗರಿಷ್ಠ 2 ಹೆಕ್ಟೇರ್ ಪ್ರದೇಶ ಮೀರದಂತೆ ಅನುಷ್ಠಾನಗೊಳಿಸಲಾಗಿದೆ. ಇದರೊಂದಿಗೆ ಮೌಲ್ಯವರ್ಧಿತ ಚಟುವಟಿಕೆಗಳಾದ ಜೇನು ಸಾಕಾಣಿಕೆ, ಸೈಲೇಜ್ ಗುಂಡಿ, ಸಮುದಾಯ ಕೆರೆ, ನೀರು ಎತ್ತುವ ಯಂತ್ರಗಳು, ಎರೆಹುಳು ಸಾಕಾಣಿಕೆ, ನೀರು ಸಂರಕ್ಷಣಾ ಕಾಮಗಾರಿಗಳಾದ ಬದು ನಿರ್ಮಾಣ, ಕೃಷಿ ಹೊಂಡ ಹಾಗೂ ಇತರೆ ಚಟುವಟಿಕೆಗಳನ್ನು ಕೈಗೊಳ್ಳಲಾಗಿದೆ. ಈ ಎಲ್ಲಾ ಚಟುವಟಿಕೆಗಳಿಂದ ರೈತನ ಆದಾಯದಲ್ಲಿ ಸುಸ್ಥಿರತೆ ತರಲು ಸಾಧ್ಯವಾಗುತ್ತದೆ ಹಾಗೂ ಸದರಿ ಯೋಜನೆಯಡಿಯಲ್ಲಿ ಮಳೆಯಾಶ್ರಿತ ಪ್ರದೇಶದಲ್ಲಿ ವಿವಿಧ ಸಮಗ್ರ ಕೃಷಿ ಪದ್ಧತಿಗಳ ಅಳವಡಿಕೆಗೆ ಸಹಾಯಧನವನ್ನು ರೈತರಿಗೆ ನೀಡಲಾಗುತ್ತಿದೆ.

**3. ಜಲಾನಯನ ಅಭಿವೃದ್ಧಿ ಮೂಲಕ ಬರಗಾಲ ತಡೆಯುವಿಕೆ (WDPD):** 2019-20ನೇ ಸಾಲಿನಿಂದ ರಾಜ್ಯದ 100 ಬರಪೀಡಿತ ಮತ್ತು ಅಂತರ್ಜಲ ಶೋಷಿತ ತಾಲ್ಲೂಕುಗಳಲ್ಲಿ ಭೂಸಂಪನ್ಮೂಲ ಸಮೀಕ್ಷೆ ಮಾಹಿತಿ ಆಧರಿಸಿ ಹಾಗೂ MGNREGA ಮತ್ತು PMKSY ಯೋಜನೆಗಳೊಂದಿಗೆ ಒಗ್ಗೂಡಿಸಿ

ಬರನಿರೋಧಕ ಜಲಾನಯನ ಚಟುವಟಿಕೆಗಳ ಅನುಷ್ಠಾನದ ಮೂಲಕ ಮಳೆಯಾಶ್ರಿತ ಜಲಾನಯನ ಪ್ರದೇಶದ ಉತ್ಪಾದಕತೆಯನ್ನು ಹೆಚ್ಚಿಸುವುದು ಹಾಗೂ ಆಸ್ತಿರಹಿತರಿಗೆ ಜೀವನೋಪಾಯ ಚಟುವಟಿಕೆಗಳನ್ನು ಅನುಷ್ಠಾನ ಮಾಡಲು ನೆರವು ನೀಡಲು ಸಹಾಯವಾಗುವುದು.

**4. ಸುಜಲ-III ನಿರ್ಗಮನ ಕಾರ್ಯಕ್ರಮ (Exit Strategy):**

ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ-II (ಸುಜಲ-III) (ಬಾಹ್ಯ ನೆರವು) ಯೋಜನೆಯು ಮುಕ್ತಾಯಗೊಂಡಿದ್ದು, ಯೋಜನಾ ನಂತರದ ಅವಧಿಯಲ್ಲಿ 2020-21ನೇ ಸಾಲಿನಿಂದ 2024-25ನೇ ಸಾಲಿನವರೆಗೆ (ಡಿಸೆಂಬರ್ 2024ರ ವರೆಗೆ) ಸುಜಲ-III ನಿರ್ಗಮನ (Exit Strategy) ಕಾರ್ಯಕ್ರಮವನ್ನು ಅನುಷ್ಠಾನ ಮಾಡಲು ರಾಜ್ಯ ಸರ್ಕಾರವು ಅನುಮೋದನೆ ನೀಡಲಾಗಿರುತ್ತದೆ.

ಸುಜಲ-III ಯೋಜನೆಯಡಿಯ ಭೂ-ಸಂಪನ್ಮೂಲ ದತ್ತಾಂಶ, ಡಿಜಿಟಲ್ ಗ್ರಂಥಾಲಯ, ಭೂ-ಸಂಪನ್ಮೂಲ ಪೋರ್ಟಲ್ ಹಾಗೂ ಮೊಬೈಲ್ ಅಪ್ಲಿಕೇಷನ್ ನವೀಕರಣ ಹಾಗೂ ನಿರ್ವಹಣೆ; ಪಾಲುದಾರ ಸಂಸ್ಥೆಗಳಿಗೆ ಒದಗಿಸಿರುವ ವೈಜ್ಞಾನಿಕ ಉಪಕರಣ, ಪ್ರಯೋಗಾಲಯ ಇತ್ಯಾದಿ ಸೌಲಭ್ಯಗಳ ನಿರ್ವಹಣೆ; ಸುಜಲ-III ಯೋಜನೆ ವ್ಯಾಪ್ತಿಯ ಗ್ರಾಮಗಳ ರೈತರಿಗೆ ಭೂ-ಸಂಪನ್ಮೂಲ ಮಾಹಿತಿ, ಡಿಜಿಟಲ್ ಗ್ರಂಥಾಲಯ ಮತ್ತು ಭೂ-ಸಂಪನ್ಮೂಲ ಪೋರ್ಟಲ್ ಬಳಸುವ ಕುರಿತು ಅರಿವು ಮೂಡಿಸಲು ತರಬೇತಿಗಳನ್ನು ಆಯೋಜಿಸುವುದು ಹಾಗೂ ಭೂ-ಸಂಪನ್ಮೂಲ ಕಾರ್ಡ್ ವಿತರಿಸುವುದು.

**5. ವಿಶ್ವಬ್ಯಾಂಕ್ ನೆರವಿನ Rejuvenating Watersheds for Agricultural Resilience through Innovative Development (REWARD) ಯೋಜನೆ:**

(ರಾಜ್ಯದ ಪಾಲು - ಶೇ.30 ಹಾಗೂ ವಿಶ್ವ ಬ್ಯಾಂಕ್ ನೆರವು - ಶೇ.70)

ಸುಜಲ-III ಯೋಜನೆ ಮಾದರಿಯಲ್ಲಿ ವಿಶ್ವಬ್ಯಾಂಕ್ ಅನುದಾನದ ನೆರವಿನೊಂದಿಗೆ ಹೊಸ ಬಹು-ರಾಜ್ಯ ಜಲಾನಯನ ಯೋಜನೆ(REWARD)ಯನ್ನು ರಾಜ್ಯದ 21 ಜಿಲ್ಲೆಗಳಲ್ಲಿ ಅನುಷ್ಠಾನ ಮಾಡಲು ಉದ್ದೇಶಿಸಲಾಗಿದೆ.

ಈ ಯೋಜನೆಯಡಿ ಪ್ರಸ್ತಾಪಿಸಲಾದ ಪ್ರಮುಖ ಕಾರ್ಯಚಟುವಟಿಕೆಗಳು: ಅಂದಾಜು 19.41 ಲಕ್ಷ ಹೆ. ಮಳೆಯಾಶ್ರಿತ ಪ್ರದೇಶದಲ್ಲಿ ಭೂ ಸಂಪನ್ಮೂಲ ಸಮೀಕ್ಷೆ (Land Resource Inventory-LRI) ಕೈಗೊಳ್ಳುವುದು; ಅಂದಾಜು 1.0 ಲಕ್ಷ ಹೆ. ಪ್ರದೇಶದ (ಒಟ್ಟು 20 ಉಪಜಲಾನಯನಗಳಲ್ಲಿ) ಭೂ ಸಂಪನ್ಮೂಲ ಮಾಹಿತಿ ಆಧರಿಸಿ ವೈಜ್ಞಾನಿಕವಾಗಿ ಸಂಪೂರ್ಣ ಜಲಾನಯನದ ಉಪಚಾರವನ್ನು ಕೈಗೊಳ್ಳುವುದು; ರೈತ ಉತ್ಪಾದಕ ಸಂಸ್ಥೆಗಳ ಪ್ರವರ್ಧನೆ ಮತ್ತು ಮೌಲ್ಯ ಸರಪಳಿ ಅಭಿವೃದ್ಧಿ ಕಾರ್ಯಕ್ರಮ (FPOs and Value Chain Development); ರೈತರಿಗೆ ಸುಧಾರಿತ ಕೃಷಿ-ಹವಾಮಾನ ಸಲಹಾ ಸೇವೆ ಒದಗಿಸುವುದು; ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು ಸಂಸ್ಥೆ ಆವರಣದಲ್ಲಿ ಜಲಾನಯನ ನಿರ್ವಹಣೆ ಕುರಿತು ಅತ್ಯುನ್ನತ ಮಟ್ಟದ ಅಧ್ಯಯನ ಮತ್ತು ತರಬೇತಿ ಕೇಂದ್ರ (Centre of Excellence on Watershed Management) ಸ್ಥಾಪಿಸುವುದು; ಭೂ-ಸಂಪನ್ಮೂಲ

ಮಾಹಿತಿಯನ್ನು ಡಿಜಿಟಲ್ ಗ್ರಂಥಾಲಯದಲ್ಲಿ ಸಂಗ್ರಹಿಸಿ ನಿರ್ಣಯ ಬೆಂಬಲ ವ್ಯವಸ್ಥೆ (DSS) ಮತ್ತು ಭೂ-ಸಂಪನ್ಮೂಲ ಪೋರ್ಟಲ್ ಬಲವರ್ಧನೆಗೊಳಿಸುವ ಮೂಲಕ ವೈಜ್ಞಾನಿಕವಾಗಿ ಕಿರುಜಲಾನಯನವಾರು ಜಲಾನಯನ ಅಭಿವೃದ್ಧಿ ಕ್ರಿಯಾಯೋಜನೆಗಳನ್ನು ತಯಾರಿಸಲು ಮತ್ತು ರೈತರಿಗೆ ಕ್ಷೇತ್ರ ಮಟ್ಟದಲ್ಲಿ ಸ್ಥಳ ನಿರ್ದಿಷ್ಟ ತಾಂತ್ರಿಕತೆಗಳ ಮಾಹಿತಿಯನ್ನು ಒದಗಿಸಲು ಉದ್ದೇಶಿಸಲಾಗಿರುತ್ತದೆ.

## 6. ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ:

**ಅ) ಸಮಸ್ಯಾತ್ಮಕ ಮಣ್ಣುಗಳ ಸುಧಾರಣೆ(RPS):** ನಿರ್ಧಿಷ್ಟ ಅಗತ್ಯತೆ ಮತ್ತು ಸ್ಥಳಕ್ಕನುಗುಣವಾಗಿ ಕೃಷಿ ಅಭಿವೃದ್ಧಿ, ವೈಜ್ಞಾನಿಕ ಇಂಜಿನಿಯರಿಂಗ್ ಕ್ರಮಗಳು, ವೈಜ್ಞಾನಿಕವಾಗಿ ರಸಗೊಬ್ಬರಗಳ ಬಳಕೆ, ಉಪ್ಪು ಸಹಿಷ್ಣು ಬೆಳೆ/ಕೃಷಿ ಅರಣ್ಯೀಕರಣ ಪದ್ಧತಿಗಳನ್ನು ಅಳವಡಿಸಿ ಸಮಸ್ಯಾತ್ಮಕ ಮಣ್ಣುಗಳ ಸುಧಾರಣೆ/ಅಭಿವೃದ್ಧಿ ಮೂಲಕ ಬೆಳೆ ಇಳುವರಿ ಹೆಚ್ಚಿಸುವುದು.

**ಆ) ತಡೆಅಣೆ ನಿರ್ಮಾಣ ಕಾರ್ಯಕ್ರಮ :** ಈ ಕಾರ್ಯಕ್ರಮದಡಿ ಅನುಷ್ಠಾನ ಮಾಡಲಾಗುವ ತಡೆಅಣೆಗಳು ಜಲಾನಯನ ತತ್ವದ ಆಧಾರದ ಮೇಲೆ ವೈಜ್ಞಾನಿಕವಾಗಿ ಸೂಕ್ತವಾದ ಸ್ಥಳಗಳಲ್ಲಿ ನಿರ್ಮಾಣ ಮಾಡುವ ಸಮುದಾಯ/ವ್ಯಕ್ತಿಗತ ರಚನೆಗಳಾಗಿದ್ದು, ಜಿಲ್ಲಾ ನೀರಾವರಿ ಯೋಜನೆಯ ಭಾಗವಾಗಿರುತ್ತದೆ.

**ಇ) ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ಕೃಷಿ ಅಭಿವೃದ್ಧಿ (PPP-IAD):** ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿಯಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಕೃಷಿಯ ಉತ್ಪಾದನೆಯಿಂದ ಹಿಡಿದು ಬಳಕೆಯ ಹಂತದವರೆಗೂ ಸಂಪೂರ್ಣ ಮೌಲ್ಯವೃದ್ಧಿ ಸರಪಳಿಯನ್ನು ಸೂಕ್ತ ಮಧ್ಯಸ್ಥಿಕೆ / ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳುವುದರ ಮೂಲಕ ಕೃಷಿಯಲ್ಲಿ ಉತ್ಪಾದಕತೆಯನ್ನು ಹೆಚ್ಚಿಸುವುದು ಹಾಗೂ ಕೊಯ್ಲೋತ್ತರ ನಷ್ಟವನ್ನು ಕಡಿಮೆಗೊಳಿಸುವುದು ಈ ಯೋಜನೆಯ ಉದ್ದೇಶವಾಗಿರುತ್ತದೆ. ಈ ಯೋಜನೆಯಿಂದ ರೈತರಿಗೆ ನೇರ ಮಾರುಕಟ್ಟೆ ಬೆಂಬಲವನ್ನು ನೀಡುವುದರ ಮೂಲಕ ಮಧ್ಯವರ್ತಿಗಳ ಹಾವಳಿಯನ್ನು ತಪ್ಪಿಸುವುದಲ್ಲದೆ, ರೈತರು ಉತ್ಪಾದಿಸುವ ಬೆಳೆಗೆ ಸೂಕ್ತ ಬೆಲೆಯನ್ನು ದೊರಕಿಸಿಕೊಡಲು ಸಹಾಯವಾಗುವುದು.

**ಈ) ರೈತ ಉತ್ಪಾದಕರ ಸಂಸ್ಥೆ (FPO):** ರೈತ ಉತ್ಪಾದಕರ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಸಣ್ಣ ಹಾಗೂ ಅತಿ ಸಣ್ಣ ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಮಾಡುವಲ್ಲಿ ಒಬ್ಬಂಟಿಯಾಗಿ ಎದುರಿಸುವ ಹಲವಾರು ಸವಾಲುಗಳನ್ನು ಪರಿಹರಿಸಬಹುದು. ಉತ್ಪಾದಕರ ಸಂಸ್ಥೆಯಾಗಿ ರೈತ ಉತ್ಪಾದಕರ ಸಂಘವು ಸ್ಥಳೀಯ ರೈತ ಸಮುದಾಯದ ಸಂಧಾನ ಸಾಮರ್ಥ್ಯವನ್ನು ಹಾಗೂ ವ್ಯವಹಾರಿಕ ಪಾಲುದಾರಿಕೆಯನ್ನು ಅಭಿವೃದ್ಧಿಗೊಳಿಸುವ ಮೂಲಕ ರೈತರ ಆರ್ಥಿಕ ಹಾಗೂ ಔದ್ಯಮಿಕ ಸಂಭಾವ್ಯ ಶಕ್ತಿಯನ್ನು ಸಡಿಲಿಸುವಂತೆ ಮಾಡಬಹುದಾಗಿದೆ. ಈ ಸಂಸ್ಥೆಗಳಿಂದ ಉತ್ಪಾದಕರ ಬೇಡಿಕೆಗೆ ಅನುಗುಣವಾಗಿ ಹಾಗೂ ಮೌಲ್ಯ ಸರಪಳಿಯ ಪದ್ಧತಿಯನ್ನು ಅಳವಡಿಸುವ ಮೂಲಕ ಉತ್ಪಾದಕರ ಆರ್ಥಿಕ ಹಾಗೂ ಸಾಮಾಜಿಕ ಲಾಭಗಳನ್ನು ಹೆಚ್ಚಿಸುವ ಉದ್ದೇಶವನ್ನು ಹೊಂದಿದೆ.

# ಕರ್ನಾಟಕ ವಿಧಾನ ಸಭೆ

1. ಸದಸ್ಯರ ಹೆಸರು : ಶ್ರೀ ಡಾ||.ಅವಿನಾಶ್ ಉಮೇಶ್ ಜಾಧವ್ (ಚಿಂಚೋಳಿ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 348
3. ಉತ್ತರಿಸಬೇಕಾದ ದಿನಾಂಕ : 16.02.2022

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಜಿಲ್ಲಾ ವ್ಯಾಪ್ತಿಯಲ್ಲಿ ಉದ್ಯೋಗ ಖಾತರಿ ಯೋಜನೆ ಅಡಿಯಲ್ಲಿ ಸನ್ 2014 ರಿಂದ ಸಾಮಾಜಿಕ ಲೆಕ್ಕ ಪರಿಶೋಧನೆಯಿಂದ ತಿಳಿದು ಬಂದಿರುವಂತೆ ಎಷ್ಟು ಜನ ಮೃತರ ಹೆಸರಲ್ಲಿ ಹಣ ಪಡೆದಿರುತ್ತಾರೆ; ಹಾಗಿದ್ದಲ್ಲಿ ದುರುಪಯೋಗಪಡಿಸಿ ಕೊಂಡವರ ಮೇಲೆ ಸರ್ಕಾರ ಕೈಗೊಂಡ ಕ್ರಮಗಳೇನು; ವಾಪಸ್ಸು ವಸೂಲಾದ ಹಣ ಎಷ್ಟು; | 2014 ರಿಂದ ಇಲ್ಲಿಯವರೆಗೆ ಕಲಬುರಗಿ ಜಿಲ್ಲೆಯಲ್ಲಿ ಮೃತರ ಹೆಸರಿನಲ್ಲಿ ಕೂಲಿ ಪಾವತಿಸಿದ್ದ 104 ಪ್ರಕರಣಗಳಲ್ಲಿ ರೂ.4,07,033/-ಗಳನ್ನು ವಸೂಲಾತಿಗೆ ಸೂಚಿಸಲಾಗಿದೆ. ಸರ್ಕಾರದ ಆದೇಶದಂತೆ ರಚನೆ ಮಾಡಿರುವ ಅಡಹಾಕ್ ಕಮಿಟಿಗಳ ಮೂಲಕ ತಾಲ್ಲೂಕು ಹಂತದಲ್ಲಿ ಸಭೆಗಳನ್ನು ನಡೆಸಿ, ಇದರಲ್ಲಿ ರೂ.50,545/- ಗಳನ್ನು ವಸೂಲಿ ಮಾಡಿ ಸರ್ಕಾರದ ಖಾತೆಗೆ ಜಮಾ ಮಾಡಲಾಗಿರುತ್ತದೆ. ಉಳಿದ ಪ್ರಕರಣಗಳಲ್ಲಿ ವಸೂಲಾತಿಯು ಪ್ರಗತಿಯಲ್ಲಿದೆ. |
| ಆ | ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಡಿಯಲ್ಲಿ ಕಳೆದ ಮೂರು ವರ್ಷಗಳಿಂದ 2022ರ ಜನವರಿ ಅಂತ್ಯದವರೆಗೆ ಸಾಮಾಜಿಕ ಲೆಕ್ಕಪರಿಶೋಧನೆಯಿಂದ ಪತ್ತೆಯಾದ ಅವ್ಯವಹಾರ ಪ್ರಕರಣಗಳು ಎಷ್ಟು ಮತ್ತು ಇದರ ಮೊತ್ತ ಎಷ್ಟು ಈ ಹಣ ವಸೂಲಿಕೆ ಕೈಗೊಂಡ ಕ್ರಮಗಳೇನು; ಈವರೆಗೆ ಎಷ್ಟು ವಸೂಲು ಮಾಡಲಾಗಿದೆ; | 1) ಸಾಮಾಜಿಕ ಪರಿಶೋಧನೆಯನ್ನು ಪ್ರತಿ 06 ತಿಂಗಳಿಗೊಮ್ಮೆ ವರ್ಷದಲ್ಲಿ 02 ಬಾರಿ ನಡೆಸಲಾಗುತ್ತದೆ.<br>2) ಕಲಬುರಗಿ ಜಿಲ್ಲೆಯಲ್ಲಿ ಕಳೆದು 03 ವರ್ಷಗಳ (2019-2020, 2020-2021, 2021 ಜನವರಿ-2022) ಸಾಮಾಜಿಕ ಪರಿಶೋಧನೆಯಲ್ಲಿ 6879 ಪ್ರಕರಣಗಳಲ್ಲಿ ಆಕ್ಷೇಪಣೆ ಮತ್ತು ವಸೂಲಾತಿಗೆ ಗುರುತಿಸಲಾದ ಮೊತ್ತ ರೂ. 9.04 ಕೋಟಿ.<br>3) ತಾಲ್ಲೂಕು ಮಟ್ಟದಲ್ಲಿ ಅಡಹಾಕ್ ಸಮಿತಿ ಸಭೆಗಳನ್ನು ನಡೆಸಿ ರೂ.30.76 ಲಕ್ಷಗಳನ್ನು ವಸೂಲು ಮಾಡಲಾಗಿದೆ ಮತ್ತು ರೂ.75.24 ಲಕ್ಷಗಳನ್ನು ವಸೂಲಾತಿಯಿಂದ ಕೈಬಿಡಲಾಗಿದೆ. ಪ್ರತಿ ವಾರ ಅಡಕ್ ಸಮಿತಿ ಸಭೆ ನೆಡಸಿ ಪ್ರಕರಣಗಳನ್ನು ತಿರುವಳಿ ಮಾಡಲು ಕ್ರಮವಹಿಸಲಾಗುತ್ತಿದೆ. |
| ಇ | ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ಸಾಮಾಜಿಕ ಪರಿಶೋಧನೆಯಿಂದ ಅವ್ಯವಹಾರ ಪತ್ತೆಯಾದ ಮೇಲೆ ಅಡ್‌ಹಾಕ್ ಸಮಿತಿ ರಚಿಸಿಕೊಂಡು ಅವ್ಯವಹಾರದ ಪ್ರಕರಣಗಳು ಕೈಬಿಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅಡ್‌ಹಾಕ್ ಸಮಿತಿ ರಚನೆ ಮತ್ತು ಕೈಬಿಡಲು ಉದ್ಯೋಗ ಖಾತರಿ ಕಾಯ್ದೆಯಲ್ಲಿ ಅವಕಾಶವಿದೆಯೇ; ಇದ್ದಲ್ಲಿ, ಸಾಮಾಜಿಕ ಲೆಕ್ಕ | ಸರ್ಕಾರದ ಆದೇಶ ಸಂ:ಗ್ರಾಅಪ120ಉಖಾಯೋ2019 ದಿನಾಂಕ:16.09.2019ರಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾಯ್ದೆ-2005ರ ಕಾರ್ಯಚರಣೆ ಮಾರ್ಗಸೂಚಿ-2013 ರಲ್ಲಿ ಕಲ್ಪಿಸಲಾಗಿರುವ ಅವಕಾಶದನ್ವಯ ಸಾಮಾಜಿಕ ಪರಿಶೋಧನಾ ವರದಿಗಳ ಮೇರೆಗೆ ಯೋಜನೆಯಡಿ ಉದ್ಭವಿಸಬಹುದಾದ ಮಾರ್ಗಸೂಚಿ ಉಲ್ಲಂಘನೆ, ಹಣಕಾಸಿನಲ್ಲಿ ದುರುಪಯೋಗ, ಕೂಲಿಕಾರರ ಕುಂದುಕೊರತೆಗಳು/ಸಾರ್ವಜನಿಕ ಅಹವಾಲುಗಳ ಕುರಿತು ತನಿಖೆ ನಡೆಸಿ ವಸೂಲಾತಿಗೆ ಸೂಚಿಸಿರುವ ಮೊತ್ತವನ್ನು ವಸೂಲಿ ಮಾಡುವುದು ಹಾಗೂ ಆಕ್ಷೇಪಣಾ ಮೊತ್ತದ ಕುರಿತು ಪರಿಣಾಮಕಾರಿಯಾಗಿ ಕ್ರಮ ವಹಿಸುವುದಕ್ಕೆ ತಾಲ್ಲೂಕು ಮಟ್ಟದ ಸಮಿತಿಯನ್ನು |

| | ಪರಿಶೋಧನೆಯ ಮಹತ್ವ ಕುಂಠಿತಗೊಳ್ಳುವುದಿಲ್ಲವೇ? | ತಾಲ್ಲೂಕು ಪಂಚಾಯತ್, ಕಾರ್ಯನಿರ್ವಾಹಕ ಅಧಿಕಾರಿಯವರ ಅಧ್ಯಕ್ಷತೆಯಲ್ಲಿ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.<br><br>ಸಾಮಾಜಿಕ ಪರಿಶೋಧನಾ ವರದಿಯು ಅಂತಿಮವಾಗಿರುವುದಿಲ್ಲ. ದುರುಪಯೋಗದ ಮೊತ್ತವನ್ನು ವಸೂಲಿ ಮಾಡುವ ಮೊದಲು ಸಾಮಾಜಿಕ ನ್ಯಾಯ ಕಲ್ಪಿಸಬೇಕಾಗುತ್ತದೆ. ಗ್ರಾಮ ಪಂಚಾಯತ್‌ಗಳು ಅನುಷ್ಠಾನ ಮಾಡಿರುವ ಕಾಮಗಾರಿಗಳಲ್ಲಾದ ಉಲ್ಲಂಘನೆಯನ್ನು ಸರಿಪಡಿಸಿಕೊಳ್ಳಲು ಅವಕಾಶ ನೀಡಬೇಕು ಹಾಗೂ ಸಾಮಾಜಿಕ ಪರಿಶೋಧನಾ ಅವಧಿಯಲ್ಲಿ ಒದಗಿಸದೇ ಇರುವ ದಾಖಲೆಗಳನ್ನು ಒದಗಿಸಲು ಅವಕಾಶ ನೀಡಿ ಆಕ್ಷೇಪಣೆ ಹಾಗೂ ವಸೂಲಾತಿ ಮೊತ್ತದ ಬಗ್ಗೆ ಪರಿಶೀಲಿಸಿ ಅಂತಿಮಗೊಳಿಸಲು ತಾಲ್ಲೂಕು ಮಟ್ಟದ ಸಮಿತಿಯನ್ನು ರಚಿಸಲಾಗಿದೆ. ಸಮಿತಿಯು ಅಂತಿಮಗೊಳಿಸಿದ ನಂತರ ಮತ್ತೊಮ್ಮೆ ಸಂಬಂಧಪಟ್ಟ, ಗ್ರಾಮ ಪಂಚಾಯಿತಿ ಸಭೆಯಲ್ಲಿ ಅನುಮೋದನೆ ಪಡೆಯಲಾಗುವುದು. ಸಮಿತಿಯು ಸಾಮಾಜಿಕ ಪರಿಶೋಧನಾ ವರದಿಯಲ್ಲಿ ವಸೂಲಾತಿಗೆ ಸೂಚಿಸಿರುವ ಹಾಗೂ ಆಕ್ಷೇಪಣೆಯಲ್ಲಿಟ್ಟ ಮೊತ್ತದ ಪ್ರತಿಯೊಂದು ಪ್ರಕರಣಗಳ ಬಗ್ಗೆ ಆಪಾದಿತರಿಗೆ ದಂಡನೆ ವಿಧಿಸುವ ಮೊದಲು ಕಾನೂನು ರೀತ್ಯಾ ನೋಟೀಸು ನೀಡಿ, ಹೇಳಿಕೆಯನ್ನು ಪಡೆದು ವಿಚಾರಣೆ ನಡೆಸಿ ವಸೂಲಾತಿಗೆ ಅಂತಿಮ ನಿರ್ಣಯ ಕೈಗೊಳ್ಳಲಾಗುತ್ತದೆ.<br>ಕಾಯ್ದೆಯ ಮೂಲ ಉದ್ದೇಶವನ್ನು ಅನುಷ್ಠಾನಕ್ಕೆ ತರಲು ಕ್ರಮ ವಹಿಸಲಾಗಿದ್ದು, ಇದರಿಂದ ಸಾಮಾಜಿಕ ಲೆಕ್ಕ ಪರಿಶೋಧನೆಯ ಮಹತ್ವ ಕುಂಠಿತಗೊಳ್ಳುವುದಿಲ್ಲ. |

RDC/EGS/53/2022, e-office No:694040

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಕೆ.ಎಸ್. ಈಶ್ವರಪ್ಪ**
**ಗ್ರಾಮೀಣಾಭಿವೃದ್ಧಿ ಮತ್ತು**
**ಪಂಚಾಯತ್ ರಾಜ್ ಸಚಿವರು**

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 349
ಸದಸ್ಯರ ಹೆಸರು : ಡಾ|| ಅವಿನಾಶ್ ಉಮೇಶ್ ಜಾಧವ್
ಉತ್ತರಿಸುವ ದಿನಾಂಕ : 16-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಕುಂಚಾವರಂನಲ್ಲಿ ಡಾ. ಬಿ.ಆರ್. ಅಂಬೇಡ್ಕರ್ ಮಾದರಿ ವಸತಿ ಶಾಲೆಯ ಸ್ವಂತ ಕಟ್ಟಡ ನಿರ್ಮಾಣಕ್ಕೆ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಡಾ.ಬಿ.ಆರ್. ಅಂಬೇಡ್ಕರ್ ಮಾದರಿ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ 9 ಎಕರೆ ಜಮೀನು ಮಂಜೂರಾಗಿರುವುದು ನಿಜವಲ್ಲವೆ; | ಬಂದಿದೆ.<br><br>ಕಲಬುರಗಿ ಜಿಲ್ಲೆ, ಚಿಂಚೋಳಿ ತಾಲ್ಲೂಕು, ಕುಂಚಾವರಂ, ಪ.ಜಾತಿ, ಡಾ. ಬಿ.ಆರ್. ಅಂಬೇಡ್ಕರ್ ವಸತಿ ಶಾಲೆಯು (ಶಾಲಾ ಸಂಕೇತ-809) ಮಂಜೂರಾಗಿದ್ದು, ಹಾಲಿ ಬಾಡಿಗೆ ರಹಿತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ.<br><br>ಸದರಿ ವಸತಿ ಶಾಲೆಗೆ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಚಿಂಚೋಳಿ ತಾಲ್ಲೂಕಿನ ಕುಂಚಾವರಂ ಗ್ರಾಮದ ಸರ್ವೇ ನಂ:84 ರಲ್ಲಿ 09 ಎಕರೆ 36 ಗುಂಟೆ ಸರ್ಕಾರಿ ಜಮೀನನ್ನು ಮಂಜೂರು ಮಾಡಿ ಕಾಯ್ದಿರಿಸಲಾಗಿದೆ. |
| ಆ) | ಹಾಗಿದ್ದಲ್ಲಿ, ಸದರಿ ಶಾಲೆಯ ಸ್ವಂತ ಕಟ್ಟಡ ನಿರ್ಮಾಣಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; ವಿಳಂಬಕ್ಕೆ ಕಾರಣಗಳೇನು; ಯಾವ ಕಾಲ ಮಿತಿಯೊಳಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಕ್ರಮಕೈಗೊಳ್ಳಲಾಗುವುದು? (ಸಂಪೂರ್ಣ ಮಾಹಿತಿ ಒದಗಿಸುವುದು) | ಈ ವಸತಿ ಶಾಲೆಯ ಸ್ವಂತ ಕಟ್ಟಡ ನಿರ್ಮಾಣಕ್ಕೆ ರೂ.2660.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿ, ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಅಗತ್ಯ ಅನುದಾನ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದ್ದು, ಕೋವಿಡ್-19 ರ ಹಿನ್ನೆಲೆಯಲ್ಲಿ ಆರ್ಥಿಕ ಸಂಕಷ್ಟವಿರುವುದರಿಂದ ಅನುದಾನ ನೀಡಲು ಸಾಧ್ಯವಿಲ್ಲವೆಂದು ಹಿಂಬರಹ ನೀಡಿರುತ್ತದೆ.<br><br>ಅನುದಾನ ಲಭ್ಯತೆ ಅನುಸಾರ ಕಾಮಗಾರಿಯನ್ನು ಕೈಗೊಳ್ಳಲು ಕ್ರಮವಹಿಸಲಾಗುವುದು. |

ಸಂಖ್ಯೆ: ಸಕಇ 74 ಮೊದೇಶಾ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 350 |
| ಸದಸ್ಯರ ಹೆಸರು | : | ಶ್ರೀ ವೆಂಕಟರಮಣಯ್ಯ ಟಿ. |
| ಉತ್ತರಿಸುವ ದಿನಾಂಕ | : | 16-02-2022 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೊಡ್ಡಬಳ್ಳಾಪುರ ತಾಲ್ಲೂಕಿನ ನಗರಸಭೆ ವ್ಯಾಪ್ತಿಯ ಮೆಟ್ರಿಕ್ ಪೂರ್ವ (ಪಜಾ) ಬಾಲಕರ ವಿದ್ಯಾರ್ಥಿ ನಿಲಯ ಮತ್ತು ಆರೋಡಿ ಗ್ರಾಮ ಮತ್ತು ಹೊಸಹಳ್ಳಿ ಗ್ರಾಮಗಳಲ್ಲಿ ಮೆಟ್ರಿಕ್ ಪೂರ್ವ (ಪಜಾ) ಬಾಲಕಿಯರ ವಿದ್ಯಾರ್ಥಿ ನಿಲಯಗಳಲ್ಲಿ ಹೆಚ್ಚುವರಿ ಕೊಠಡಿಗಳು ಇಲ್ಲದೆ ವಿದ್ಯಾರ್ಥಿಗಳಿಗೆ ಅನಾನುಕೂಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದೊಡ್ಡಬಳ್ಳಾಪುರ ಟೌನ್‌ನಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಸ್ವಂತ ಕಟ್ಟಡದಲ್ಲಿ ನಡೆಸುತ್ತಿರುವ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯದ ಮಂಜೂರಾತಿ ಸಂಖ್ಯೆ 215 ಇದ್ದು, 2019-20ನೇ ಸಾಲಿಗೆ 122 ವಿದ್ಯಾರ್ಥಿಗಳು ಹಾಗೂ 2021-22ನೇ ಸಾಲಿಗೆ ಕೋವಿಡ್-19 ಹಿನ್ನೆಲೆಯಲ್ಲಿ 76 ವಿದ್ಯಾರ್ಥಿಗಳು ದಾಖಲಾಗಿರುತ್ತಾರೆ. ಪ್ರಸ್ತುತ ಸದರಿ ವಿದ್ಯಾರ್ಥಿ ನಿಲಯದಲ್ಲಿ ದಾಖಲಾಗಿರುವ ವಿದ್ಯಾರ್ಥಿಗಳಿಗೆ ಅನುಗುಣವಾಗಿ ವಾಸದ ಕೊಠಡಿಗಳು ಇರುತ್ತದೆ. ಮುಂದಿನ ಶೈಕ್ಷಣಿಕ ವರ್ಷಗಳಲ್ಲಿ ಸದರಿ ವಿದ್ಯಾರ್ಥಿ ನಿಲಯಕ್ಕೆ ಹೆಚ್ಚಿನ ವಿದ್ಯಾರ್ಥಿಗಳು ದಾಖಲಾದಲ್ಲಿ, ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆಗೆ ಅನುಗುಣವಾಗಿ ಹೆಚ್ಚುವರಿ ವಾಸದ ಕೊಠಡಿಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು.<br><br>ಮುಂದುವರೆದು, ದೊಡ್ಡಬಳ್ಳಾಪುರ ತಾಲ್ಲೂಕು ವ್ಯಾಪ್ತಿಯ ಆರೂಡಿ ಮತ್ತು ಹೊಸಹಳ್ಳಿ ಗ್ರಾಮಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯಗಳು ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಬಾಲಕಿ ಮತ್ತು ಬಾಲಕರ ಮೆಟ್ರಿಕ್ ಪೂರ್ವ (ಪಜಾ) ವಿದ್ಯಾರ್ಥಿ ನಿಲಯಗಳಲ್ಲಿ ಹೆಚ್ಚುವರಿ ಕೊಠಡಿಗಳನ್ನು ನಿರ್ಮಾಣ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | |

ಸಕಇ 97 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 351 |
|---|---|
| ಸದಸ್ಯರ ಹೆಸರು | ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) |
| ಉತ್ತರಿಸಬೇಕಾದ ದಿನಾಂಕ | 16.02.2022 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ದೊಡ್ಡಬಳ್ಳಾಪುರ ತಾಲ್ಲೂಕಿನ ಗ್ರಾಮಗಳಲ್ಲಿ ಗ್ರಾಮೀಣ ಸಂಪರ್ಕ ರಸ್ತೆಗಳು ಬಳಕೆಗೆ ತೀವ್ರತರವಾಗಿ ಹದಗೆಟ್ಟಿದ್ದು, ಇದರಿಂದ ಸಾರ್ವಜನಿಕರಿಗೆ, ರೈತರಿಗೆ, ಸಾರ್ವಜನಿಕ ವಾಹನಗಳ ಸಂಚಾರಕ್ಕೆ ಅನಾನುಕೂಲವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ. | ಹಾಗಿದ್ದಲ್ಲಿ, ಸರ್ಕಾರವು ಅನುದಾನ ಮಂಜೂರು ಮಾಡಲು ಕೈಗೊಂಡಿರುವ ಕ್ರಮಗಳೇನು? | 2021-22ನೇ ಸಾಲಿನಲ್ಲಿ ಹಾನಿಗೊಳಗಾದ ರಸ್ತೆ/ಸೇತುವೆ/ಇತರೆ ಕಾಮಗಾರಿಗಳ ದುರಸ್ಥಿಗೆ ಬೇಕಾಗಿರುವ ಅನುದಾನವನ್ನು ಒದಗಿಸುವಂತೆ ಕೋರಿ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಹಾಗೂ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ<br><br>ಆರ್ಥಿಕ ಇಲಾಖೆಯು ಹಂಚಿಕೆ ಮಾಡಿರುವ ಅನುದಾನದ ಮಿತಿಯಲ್ಲಿಯೇ ಅವಶ್ಯವಿರುವ ಹಾನಿಗೊಳಗಾದ ರಸ್ತೆಗಳನ್ನು ದುರಸ್ತಿಪಡಿಸಲು ಕ್ರಮ ಕೈಗೊಳ್ಳಬೇಕಿದೆ.<br><br>ಪ್ರಸ್ತುತ ಸಾಲಿನಲ್ಲಿ ಲೆ.ಶೀ. 3054 ಸಿಎಂಜಿಎಸ್ ವೈ ಯೋಜನೆಯಡಿ 1024.90 ಕಿ.ಮೀ. ಉದ್ದದ ರಸ್ತೆಗಳನ್ನು ನಿರ್ವಹಣೆ ಮಾಡಲು ರೂ. 132.36 ಲಕ್ಷಗಳನ್ನು ಹಂಚಿಕೆ ಮಾಡಿದ್ದು, ರೂ. 99.27 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. |

ಸಂಖ್ಯೆ: ಗ್ರಾಅಪ:15ನೇವಿಸ:200/10:ಆರ್.ಆರ್.ಸಿ:2021

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭಾ

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | 352 |
| **ಸದಸ್ಯರ ಹೆಸರು** | ಶ್ರೀ ವೆಂಕಟರಮಣಯ್ಯ (ದೊಡ್ಡಬಳ್ಳಾಪುರ) |
| **ಉತ್ತರಿಸಬೇಕಾದ ದಿನಾಂಕ** | 16.02.2022 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ 2021-22 ನೇ ಸಾಲಿನಲ್ಲಿ ಹೆಚ್ಚು ಮಳೆಯಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆಗಳ ಅಭಿವೃದ್ಧಿಗೆಅನುದಾನ ಮಂಜೂರು ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ. | ಹಾಗಿದ್ದಲ್ಲಿ, ಸರ್ಕಾರವು ಅನುದಾನ ಮಂಜೂರು ಮಾಡಲು ಕೈಗೊಂಡಿರುವ ಕ್ರಮಗಳೇನು? | • 2021-22ನೇ ಸಾಲಿನಲ್ಲಿ ಹೆಚ್ಚು ಮಳೆಯಿಂದ ಹಾನಿಗೊಳಗಾದ ಗ್ರಾಮೀಣ ರಸ್ತೆಗಳನ್ನು ಪರಿಶೀಲಿಸಿ ದುರಸ್ತಿ ಪಡಿಸಲು ಬೇಕಾದ ಅನುದಾನದೊಂದಿಗೆ ಅಂದಾಜುಪಟ್ಟಿಯನ್ನು ತಯಾರಿಸಿ **ಅನುಬಂಧ-1** ರಲ್ಲಿ ಲಗತ್ತಿಸಿದೆ.<br>• 2021-22ನೇ ಸಾಲಿನಲ್ಲಿ ಮಳೆಯಿಂದ ಹಾನಿಗೊಳಗಾದ ರಸ್ತೆ/ಸೇತುವೆ/ಇತರೆ ಕಾಮಗಾರಿಗಳ ದುರಸ್ತಿಗೆ ಬೇಕಾಗಿರುವ ಅನುದಾನವನ್ನು ಒದಗಿಸುವಂತೆ ಕೋರಿ ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ) ಹಾಗೂ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ.<br>• ಅನುದಾನ ಲಭ್ಯತೆಯನುಸಾರ ಹಾನಿಗೊಳಗಾದ ರಸ್ತೆಗಳನ್ನು ದುರಸ್ತಿಪಡಿಸಲು ಕ್ರಮ ಕೈಗೊಳ್ಳಬೇಕಿದೆ. |

ಸಂಖ್ಯೆ: ಗ್ರಾಅಪ:15ನೇವಿಸ:200/1:ಆರ್.ಆರ್.ಸಿ:2021

**(ಕೆ.ಎಸ್.ಈಶ್ವರಪ್ಪ)**
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು

ಅನುಬಂಧ - 1

## 2021-22 ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಸುರಿದ ಭಾರಿ ಮಳೆಯಿಂದ ಹಾನಿಗೊಳಗಾದ ರಸೆಗಳ್ತ ಮತ್ತು ಸೇತುವೆಗಳ ವಿವರ

| ಕ್ರ.ಸಂ | ಗ್ರಾಮ ಪಂಚಾಯಿತಿ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|---|
| 1 | 2 | 3 | 4 |
| 1 | ಹೊಸಹಳ್ಳಿ | ಕೊಟ್ಟಿಗೆಮಾಚೇನಹಳ್ಳಿಯ ಹಳ್ಳದಲ್ಲಿ ಸೇತುವೆ ನಿರ್ಮಾಣ | 70.00 |
| 2 | ಸಾಸಲು | ಲಕ್ಕೇನಹಳ್ಳಿ ಗರಡಗಲ್ಲು ರಸ್ತೆ ದುರಸ್ಥಿ ಕಾಮಗಾರಿ (0.5 ಕಿ.ಮೀ) | 5.00 |
| 3 | ಸಾಸಲು | ಸೂಲಿಕುಂಟೆ– ಚನ್ನವೀರನಹಳ್ಳಿ ರಸ್ತೆ ದುರಸ್ಥಿ ಕಾಮಗಾರಿ (3.6 ಕಿ.ಮೀ) | 10.00 |
| 4 | ಸಾಸಲು | ದಾಸರಪಾಳ್ಯದಿಂದ ಗಾಣದಾಳು ರಸ್ತೆ ದುರಸ್ಥಿ ಕಾಮಗಾರಿ (2.58 ಕಿ.ಮೀ) | 5.00 |
| 5 | ಸಾಸಲು | ತಮ್ಮಗ್ರಾನಹಳ್ಳಿ–ಸಾಸಲು ರಸ್ತೆ ದುರಸ್ಥಿ ಕಾಮಗಾರಿ (1.5 ಕಿ.ಮೀ) | 10.00 |
| 6 | ಹೊಸಹಳ್ಳಿ | ತೇಕಲಹಳ್ಳಿಯಿಂದ ಹೊಸಹಳ್ಳಿಗೆ ಸೇರುವ ರಸ್ತೆ ದುರಸ್ಥಿ ಕಾಮಗಾರಿ. (0.9 ಕಿ.ಮೀ) | 9.50 |
| 7 | ಆರೂಡಿ | ವಡ್ಡನಹಳ್ಳಿ ಗ್ರಾಮಕ್ಕೆ ಸಂಪರ್ಕ ಕಲ್ಪಿಸುವ ರಸ್ತೆಗೆ ಸೇತುವೆ ನಿರ್ಮಾಣ ಕಾಮಗಾರಿ. (1.0 ಕಿ.ಮೀ) | 9.50 |
| 8 | ತೂಬಗೆರೆ | ತಿಮ್ಮೋಜನಹಳ್ಳಿಯಿಂದ ತೂಬಗೆರೆ ರಸ್ತೆ ದುರಸ್ಥಿ ಕಾಮಗಾರಿ (2.0 ಕಿ.ಮೀ) | 15.00 |
| 9 | ಮೇಲಿನಜೂಗಾನಹಳ್ಳಿ | ಎಸ್.ಎಸ್.ಘಾಟಿ ರಸ್ತೆಯಿಂದ ನಾಗೇನಹಳ್ಳಿವರೆಗೆ ರಸ್ತೆ ದುರಸ್ಥಿ ಕಾಮಗಾರಿ.(1.0ಕಿ.ಮೀ) | 5.00 |
| 10 | ಮೆಳೆಕೋಟೆ | ಚನ್ನಾಪುರದಿಂದ ಚಿಕ್ಕರಾಯಪ್ಪನಹಳ್ಳಿ ರಸ್ತೆ ದುರಸ್ಥಿ ಕಾಮಗಾರಿ.(1.0 ಕಿ.ಮೀ) | 10.00 |
| 11 | ಕಂಟನಕುಂಟೆ | ವೈ.ಹೆಚ್.ರಸ್ತೆಯಿಂದ ಮಲ್ಲಾತಹಳ್ಳಿವರೆಗೆ ರಸ್ತೆ ದುರಸ್ಥಿ ಕಾಮಗಾರಿ (0.5 ಕಿ.ಮೀ) | 10.00 |
| 12 | ಹೆಗ್ಗಡಿಹಳ್ಳಿ | ನಂದಿಗುಂದಯಿಂದ ಕಣಿವೆಪುರ ರಸ್ತೆ ದುರಸ್ಥಿ ಕಾಮಗಾರಿ(0.5 ಕಿ.ಮೀ) | 5.00 |
| 13 | ಸಿ.ಡಿ.ಅಗ್ರಹಾರ | ಕೋಡಿಹಳ್ಳಿ ಮುಖ್ಯ ರಸ್ತೆಯಿಂದ ಬಂಡಯ್ಯನ ಪಾಳ್ಯ ಹೋಗುವ ರಸ್ತೆ ದುರಸ್ಥಿ (1.2 ಕಿ.ಮೀ) | 5.00 |
| 14 | ಸಿ.ಡಿ.ಅಗ್ರಹಾರ | ಬೀರಯ್ಯನಪಾಳ್ಯ ಜನತಾಕಾಲೋನಿಯಿಂದ ನೃತ್ಯಗ್ರಾಮದವರೆಗೆ ರಸ್ತೆ ದುರಸ್ಥಿ (2.3 ಕಿ.ಮೀ) | 6.00 |
| 15 | ಹಾದ್ರಿಪುರ | ನಾರನಹಳ್ಳಿಯಿಂದ ಹೋಲೇರಹಳ್ಳಿ ರಸ್ತೆ ದುರಸ್ಥಿ(0.8ಕಿ.ಮೀ) | 4.00 |

## 2021-22 ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಸುರಿದ ಭಾರಿ ಮಳೆಯಿಂದ ಹಾನಿಗೊಳಗಾದ ರಸೆಗಳ್ತ ಮತ್ತು ಸೇತುವೆಗಳ ವಿವರ

| ಕ್ರ.ಸಂ | ಗ್ರಾಮ ಪಂಚಾಯಿತಿ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|---|
| 1 | 2 | 3 | 4 |
| 16 | ಮೇಲಿನಜೂಗಾನಹಳ್ಳಿ | ತುರುವನಹಳ್ಳಿಯಿಂದ ಗೆದ್ದಲಪಾಳ್ಯ ರಸ್ತೆ ದುರಸ್ಥಿ (3.2 ಕಿ.ಮೀ) | 8.00 |
| 17 | ಹಾದ್ರಿಪುರ | ರಾಮೇಶ್ವರದಿಂದ ಬೋಕಿಪುರಕ್ಕೆ ಸೇರುವ ರಸ್ತೆ ದುರಸ್ಥಿ (1.00 ಕಿ.ಮೀ) | 4.00 |
| 18 | ಕಾ'ಡನೂರು | ಕಾಡನೂರು ನಿಂದ 17 ನೇ ಮೈಲಿ ರಸ್ತೆ ದುರಸ್ಥಿ ಕಾಮಗಾರಿ (2.0ಕಿ.ಮೀ) | 5.00 |
| 19 | ಹಾದ್ರಿಪುರ | ರಾಮೇಶ್ವರ ಹಾದ್ರಿಪುರ ರಸ್ತೆ ದುರಸ್ಥಿ (2.0 ಕಿ.ಮೀ) | 10.00 |
| 20 | ಹಾದ್ರಿಪುರ | ಹಾದ್ರಿಪುರದಿಂದ ಮುಪ್ಪಡಿಘಟ್ಟ ರಸ್ತೆ ದುರಸ್ಥಿ (1.75ಕಿ.ಮೀ) | 10.00 |
| 21 | ಕನಸವಾಡಿ | ಕನ್ನಮಂಗಲ ಕಾಲೋನಿ ಹತ್ತಿರ ಆದಿ ಶಕ್ತಿ ಅಮ್ಮನವರ ದೇವಸ್ತಾನದ ರಸ್ತೆ ದುರಸ್ಥಿ (3.0ಕಿ.ಮೀ) | 5.00 |
| 22 | ಹಾದ್ರಿಪುರ | ನಾರನಹಳ್ಳಿಯಿಂದ ಚಿಕ್ಕನಹಳ್ಳಿಗೆ ಸೇರುವ ರಸ್ತೆ ದುರಸ್ಥಿ (0.7 ಕಿ.ಮೀ) | 4.00 |
| 23 | ಹಾದ್ರಿಪುರ | ಬಸಪ್ಪನಪಾಳ್ಯದಿಂದ ಹಾದ್ರಿಪುರವರೆಗೆ ರಸ್ತೆ ದುರಸ್ಥಿ (0.5 ಕಿ.ಮೀ) | 5.00 |
| 24 | ಹೆಗ್ಗಡಿಹಳ್ಳಿ | ಎಸ್.ಹೆಚ್.74ನಿಂದ ದಂಡುದಾಸಕೊಡಿಗೆಹಳ್ಳಿ ವರಗೆ ರಸ್ತೆ ದುರಸ್ಥಿ (2.4ಕಿ.ಮೀ) | 10.00 |
| 25 | ಹೆಗ್ಗಡಿಹಳ್ಳಿ | ದಂಡುದಾಸಕೊಡಿಗೆಹಳ್ಳಿ-ಕೊನಘಟ್ಟ ರಸ್ತೆಯಿಂದ ಸೊಣ್ಣಮಾರನಹಳ್ಳಿ ವರೆಗೆ ರಸ್ತೆ ಮತ್ತು ಮೋರಿ ದುರಸಿ (0.3ಕಿ.ಮೀ) | 4.00 |
| 26 | ಕನಸವಾಡಿ | ಎಸ್.ಹೆಚ್.74ನಿಂದ ಜೋಡಿತಿಮ್ಮಸಂದ್ರ ವರಗೆ ವಯಾ ಪುಟ್ಟೇನಹಳ್ಳಿ ರಸ್ತೆ ದುರಸ್ಥಿ (2.2 ಕಿ.ಮೀ) | 10.00 |
| 27 | ತೂಬುಗೆರೆ | ಹೆಚ್.ಎಂ.ರಸ್ತೆಯಿಂದ ಹಿರೇಮುದೇನಹಳ್ಳಿ ಮಾರ್ಗವಾಗಿ ಮುಕ್ಕಡಿಘಟ್ಟ ವರಗೆ ರಸ್ತೆ ದುರಸ್ಥಿ (9.6 ಕಿ.ಮೀ) | 12.00 |
| 28 | ಸಿ.ಡಿ.ಅಗ್ರಹಾರ | ಮಧುರೆ ಮುಖ್ಯ ರಸ್ತೆಯಿಂದ ಕುಂಬಳಗುಂಟೆ ಹೂಗುವ ರಸ್ತೆ ದುರಸ್ಥಿ (0.8 ಕಿ.ಮೀ) | 4.00 |

## 2021-22 ನೇ ಸಾಲಿನಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಸುರಿದ ಭಾರಿ ಮಳೆಯಿಂದ ಹಾನಿಗೊಳಗಾದ ರಸೆಗಳ್ಳ ಮತ್ತು ಸೇತುವೆಗಳ ವಿವರ

| ಕ್ರ.ಸಂ | ಗ್ರಾಮ ಪಂಚಾಯಿತಿ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|---|
| 1 | 2 | 3 | 4 |
| 29 | ಮೆಳೆಕೋಟೆ | ಮೆಳೆಕೋಟೆ ಚನ್ನಾಪುರ ರಸ್ತೆ ದುರಸ್ಥಿ ಕಾಮಗಾರಿ (0.8 ಕಿ.ಮೀ) | 10.00 |
| 30 | ದರ್ಗಾಜೋಗಿಹಳ್ಳಿ | ನಾಗಸಂದ್ರ ದಿಂದ ಆಲಹಳ್ಳಿ ವರೆಗೆ ರಸ್ತೆ ದುರಸ್ಥಿ ಕಾಮಗಾರಿ (1.2 ಕಿ.ಮೀ) | 25.00 |
| 31 | ದರ್ಗಾಜೋಗಿಹಳ್ಳಿ | ನಾಗಸಂದ್ರ ದಿಂದ ದರ್ಗಾಜೋಗಿಹಳ್ಳಿ ವರೆಗೆ ರಸ್ತೆ ದುರಸ್ಥಿ ಕಾಮಗಾರಿ (1.0ಕಿ.ಮೀ) | 25.00 |
| 32 | ಸಾಸಲು | ಮಚೇನಹಳ್ಳಿಯಿಂದ ತಾಲ್ಲೂಕು ಗಡಿ ರಸ್ತೆ ದುರಸ್ಥಿ ಕಾಮಗಾರಿ.(0.4 ಕಿ.ಮೀ) | 5.00 |
| 33 | ಸಾಸಲು | ದಾಸರಪಾಳ್ಯ ಯಿಂದ ಶ್ರೀರಾಮನಹಳ್ಳಿ ಕಾಲೋನಿ ರಸ್ತೆ ದುರಸ್ಥಿ ಕಾಮಗಾರಿ.(1.38 ಕಿ.ಮೀ) | 5.00 |
| 34 | ಸಾಸಲು | ಸಿಂಗೇನಹಳ್ಳಿ ಕ್ರಾಸ್ ನಿಂದ ಲಕ್ಕೇನಹಳ್ಳಿ ರಸ್ತೆ ದುರಸ್ಥಿ ಕಾಮಗಾರಿ.(0.8 ಕಿ.ಮೀ) | 10.00 |
| 35 | ಸಾಸಲು | ಗರಡಗಲ್ಲು ಯಿಂದ ಕನಕೇನಹಳ್ಳಿ ರಸ್ತೆ ದುರಸ್ಥಿ ಕಾಮಗಾರಿ. (1.6 ಕಿ.ಮೀ) | 22.50 |
| 36 | ದೊಡ್ಡಬೆಳವಂಗಲ | ವಡ್ಡರಪಾಳ್ಯ ಗ್ರಾಮದಿಂದ ಕಾಲೋನಿ ರಸ್ತೆ ದುರಸ್ಥಿ (0.75 ಕಿ.ಮೀ) | 5.00 |
| | | | **377.50** |

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 353

ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಉತ್ತರಿಸುವ ದಿನಾಂಕ : 16-02-2022

ಉತ್ತರಿಸುವ ಸಚಿವರು : ಮಾನ್ಯ ಕೃಷಿ ಸಚಿವರು

| ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2013ರಲ್ಲಿ ಬೆಳಗಾವಿ ಜಿಲ್ಲೆ ಕಿತ್ತೂರು ತಾಲ್ಲೂಕು ಘೋಷಣೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ. |
| ಆ | ಕಿತ್ತೂರು ತಾಲ್ಲೂಕು ಮಟ್ಟದಲ್ಲಿ ಹುದ್ದೆಗಳ ಸಹಿತ ಸಹಾಯಕ ನಿರ್ದೇಶಕರು ಕೃಷಿ ಇಲಾಖೆ ಕಛೇರಿ ಆರಂಭಿಸುವ ಪ್ರಸ್ತಾವನೆ ಸರ್ಕಾರದ ಯಾವ ಹಂತದಲ್ಲಿದೆ; | ಕಿತ್ತೂರು ತಾಲ್ಲೂಕು ಒಳಗೊಂಡಂತೆ ನೂತನವಾಗಿ ರಚನೆಯಾದ 63 ಹೊಸ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಕಛೇರಿ ಹಾಗೂ ಸಿಬ್ಬಂದಿಗಳಿಗೆ ಹುದ್ದೆಗಳನ್ನು ಸೃಜಿಸುವ ಪ್ರಸ್ತಾವನೆಗೆ ಈ ಹಿಂದೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿದ್ದು, ಆರ್ಥಿಕ ಇಲಾಖೆಯು ಇದಕ್ಕೆ ತಗಲುವ ವೆಚ್ಚ (ಆವರ್ತಕ) ರೂ.125.64 ಕೋಟಿಗಳು ಅನಾವರ್ತಕ ವೆಚ್ಚ ಒಟ್ಟು ರೂ 340.00 ಲಕ್ಷಗಳಾಗುತ್ತಿದ್ದು, ಇದನ್ನು ಹೆಚ್ಚುವರಿಯಾಗಿ ಒದಗಿಸಲು ಈಗಿನ ಆರ್ಥಿಕ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲವೆಂದು ತಿಳಿಸಿ, ಈ ಪ್ರಸ್ತಾವನೆಯನ್ನು ಮುಂದೂಡುವಂತೆ ಅಭಿಪ್ರಾಯ ನೀಡಿರುತ್ತದೆ.<br>ಆದಾಗ್ಯೂ, ಕೃಷಿ ಇಲಾಖೆಯ ಯೋಜನೆಗಳನ್ನು ರೈತರಿಗೆ ಸಕಾಲದಲ್ಲಿ ಒದಗಿಸಲು ಇಲಾಖೆಯು ಆದ್ಯತೆ ನೀಡುತ್ತಿದ್ದು, ಈ ಸಂಬಂಧ ಹೊಸ ತಾಲ್ಲೂಕುಗಳಿಗೆ ಕಛೇರಿ, ಮೂಲಭೂತ ಸೌಲಭ್ಯ ಹಾಗೂ ಸಿಬ್ಬಂದಿಗಳನ್ನು ಸೃಜಿಸುವ ಕುರಿತು ಸಹಮತಿ ನೀಡುವಂತೆ ಮತ್ತೊಮ್ಮೆ ಆರ್ಥಿಕ ಇಲಾಖೆಯನ್ನು ಕೋರಲಾಗಿದ್ದು, ಸಹಮತಿಯನ್ನು ನಿರೀಕ್ಷಿಸಲಾಗಿದೆ. |
| ಇ) | ಯಾವ ಕಾಲಮಿತಿಯಲ್ಲಿ ಕೃಷಿ ಇಲಾಖೆ ಕಛೇರಿ ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು? | |

AGRI-AGS/35/2022

(ಬಿ.ಸಿ.ಪಾಟೀಲ್)

ಕೃಷಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 354
ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ
ಉತ್ತರಿಸುವ ದಿನಾಂಕ : 16-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 2013 ರಲ್ಲಿ ಬೆಳಗಾವಿ ಜಿಲ್ಲೆ ಕಿತ್ತೂರು ತಾಲ್ಲೂಕು ಘೋಷಣೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ. |
| ಆ) | ಕಿತ್ತೂರು ತಾಲ್ಲೂಕು ಮಟ್ಟದಲ್ಲಿ ಹುದ್ದೆಗಳ ಸಹಿತ ಸಹಾಯಕ ನಿರ್ದೇಶಕರು ಸಮಾಜ ಕಲ್ಯಾಣ ಇಲಾಖೆ ಕಛೇರಿ ಆರಂಭಿಸುವ ಪ್ರಸ್ತಾವನೆ ಸರ್ಕಾರದ ಯಾವ ಹಂತದಲ್ಲಿದೆ; | ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 09 ಭೂದಾಪು 2012 ದಿ:15-03-2013 ರನ್ವಯ ನೂತನವಾಗಿ ಕಿತ್ತೂರು ತಾಲ್ಲೂಕು ರಚನೆಯಾಗಿರುತ್ತದೆ. ಹಾಗೆಯೇ, ದಿನಾಂಕ:06-09-2017 ರಲ್ಲಿ 50 ತಾಲ್ಲೂಕು ಮತ್ತು ದಿನಾಂಕ:22-01-2018 ರಲ್ಲಿ 01 ಒಟ್ಟು 51 ನೂತನ ತಾಲ್ಲೂಕುಗಳು ರಚನೆಯಾಗಿರುತ್ತವೆ.<br><br>ಈ ಹೊಸ ತಾಲ್ಲೂಕುಗಳಲ್ಲಿ ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಕಛೇರಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಹುದ್ದೆಗಳ ಸೃಜನೆಯ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಆರ್ಥಿಕ ಇಲಾಖೆಯು ಹಳೆ ತಾಲ್ಲೂಕುಗಳಲ್ಲಿರುವ ಸಿಬ್ಬಂದಿಗಳನ್ನೇ ಉಪಯೋಗಿಸಿಕೊಂಡು ತಾಲ್ಲೂಕು ಕಛೇರಿಗಳನ್ನು ತೆರೆಯಲು ಮತ್ತು ಈ ಪ್ರಸ್ತಾವನೆಯನ್ನು ಎರಡು ವರ್ಷಗಳವರೆಗೆ ಮುಂದೂಡುವಂತೆ ದಿನಾಂಕ: 10-06-2020 ರಂದು ತಿಳಿಸಿರುತ್ತದೆ. ಪ್ರಸ್ತುತ ಸರ್ಕಾರದ ಪತ್ರ ಸಂ:ಸಕಇ 218 ಪಕವಿ 2021 ದಿ:03-09-2021 ರಲ್ಲಿ ಆಡಳಿತ ಸುಧಾರಣಾ ಕೋಶವು ಇಲಾಖೆಗಳ ವಿಲೀನದ ಬಗ್ಗೆ ಪರಿಶೀಲಿಸುತ್ತಿರುವುದರಿಂದ ಅಂತಿಮ ವರದಿ ಬರುವವರೆಗೆ ತಾಲ್ಲೂಕು ಮಟ್ಟದ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಪ್ರಸ್ತುತ ಕೆಲಸ ನಿರ್ವಹಿಸುತ್ತಿರುವ ವ್ಯವಸ್ಥೆಯನ್ನೇ ಮುಂದುವರೆಸಲು ನಿರ್ದೇಶನವಿರುತ್ತದೆ. |
| ಇ) | ಯಾವ ಕಾಲಮಿತಿಯಲ್ಲಿ ಸಮಾಜ ಕಲ್ಯಾಣ ಇಲಾಖೆ ಕಛೇರಿ ಆರಂಭಿಸಲು ಕ್ರಮ ಕೈಗೊಳ್ಳಲಾಗುವುದು? | |

| | | ಮುಂದುವರೆದು, ಆರ್ಥಿಕ ಇಲಾಖೆಗೆ ಸದರಿ ಪ್ರಸ್ತಾವನೆಯ ಬಗ್ಗೆ ಪುನರ್ ಪರಿಶೀಲಿಸುವಂತೆ ಕೋರಲಾಗಿತ್ತು. ಆರ್ಥಿಕ ಇಲಾಖೆಯು ಆಡಳಿತ ಸುಧಾರಣಾ ಕೋಶವು ಇಲಾಖೆಗಳ ವಿಲೀನದ ಬಗ್ಗೆ ಪರಿಶೀಲಿಸುತ್ತಿರುವುದರಿಂದ ಅಂತಿಮ ವರದಿ ಬರುವವರೆಗೆ ತಾಲ್ಲೂಕು ಮಟ್ಟದ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ಪ್ರಸುತ್ತ ಕೆಲಸ ನಿರ್ವಹಿಸುತ್ತಿರುವ ವ್ಯವಸ್ಥೆಯನ್ನೇ ಮುಂದುವರೆಸಲು ದಿನಾಂಕ: 18-03-2021 ರಂದು ನಿರ್ದೇಶನವಿರುತ್ತದೆ. |
|---|---|---|

ಸಕಇ 101 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **355** |
| ಮಾನ್ಯ ಸದಸ್ಯರ ಹೆಸರು | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ(ಕಿತ್ತೂರು) |
| ಉತ್ತರಿಸಬೇಕಾದ ದಿನಾಂಕ | 16.02.2022 |
| ಉತ್ತರಿಸುವ ಸಚಿವರು | ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿ ಎಷ್ಟು ಸಮುದಾಯ ಭವನ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿತ್ತು; (ವರ್ಷವಾರು, ಗ್ರಾಮಗಳವಾರು ಅನುದಾನ ಬಿಡುಗಡೆಯ ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ತಾಲ್ಲೂಕು ಮಟ್ಟದ ಹಿಂದೂ ಗೋಂಧಳಿ ಅಲೆಮಾರಿ ಸೇವಾ ಅಭಿವೃದ್ಧಿ ಸಂಘ (ರಿ) ಕಿತ್ತೂರು ಬೈಲಹೊಂಗಲ ತಾಲ್ಲೂಕು,ಬೆಳಗಾವಿ ಜಿಲ್ಲೆ ಇವರಿಗೆ ಸಮುದಾಯ ಭವನ ಕಟ್ಟಡ ನಿರ್ಮಾಣಕ್ಕೆ ರೂ.10.00 ಲಕ್ಷಗಳನ್ನು ಮಂಜೂರು ಮಾಡಿದ್ದು, ಅದರಲ್ಲಿ ಮೊದಲನೇ ಕಂತಾಗಿ ರೂ.1.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ ಸದರಿ ಮಂಜೂರಾತಿ ನೀಡಿದ ಸಮುದಾಯ ಭವನಗಳ ನಿರ್ಮಾಣಕ್ಕೆ ಸಂಪೂರ್ಣವಾಗಿ ಅನುದಾನ ಬಿಡುಗಡೆ ಮಾಡಲಾಗಿದೆಯೆ; ;(ವರ್ಷವಾರು, ಕಂತುಗಳವಾರು ಸಂಸ್ಥೆಗಳ ಹೆಸರು ಸಹಿತ ಅನುದಾನ ಬಿಡುಗಡೆಯ ವಿವರ ನೀಡುವುದು) | ಇಲ್ಲ.<br><br>2019-20ನೇ ಸಾಲಿನಲ್ಲಿ ತಾಲ್ಲೂಕು ಮಟ್ಟದ ಹಿಂದೂ ಗೋಂಧಳಿ ಅಲೆಮಾರಿ ಸೇವಾ ಅಭಿವೃದ್ಧಿ ಸಂಘ (ರಿ) ಕಿತ್ತೂರು ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರಿಗೆ ಸಮುದಾಯ ಭವನ ಕಟ್ಟಡ ನಿರ್ಮಾಣಕ್ಕೆ ರೂ.10.00 ಲಕ್ಷಗಳನ್ನು ಮಂಜೂರು ಮಾಡಿದ್ದು, ಈ ಪೈಕಿ ಮೊದಲನೇ ಕಂತಾಗಿ ರೂ.1.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. |
| ಇ) | ಅನುದಾನ ಬಿಡುಗಡೆಯಾಗದೆ ಸಮುದಾಯ ಭವನಗಳ ಕಾಮಗಾರಿ ಅಪೂರ್ಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಹೌದು. |

| ಈ) | ಅನುದಾನ ಬಿಡುಗಡೆಗೆ ಸರ್ಕಾರದ ಕ್ರಮವೇನು? | ವಿವಿಧ ಸಮುದಾಯಗಳ ಅಭಿವೃದ್ಧಿ ಕಾರ್ಯಕ್ರಮದಡಿಯಲ್ಲಿ ರಾಜ್ಯದ ಒಟ್ಟಾರೆ ಬೇಡಿಕೆ, ಆಯವ್ಯಯದ ಲಭ್ಯತೆ ಹಾಗೂ ಹಣ ಬಳಕೆ ಪ್ರಮಾಣ ಪತ್ರ ಸ್ವೀಕರಿಸಿದ ಜೇಷ್ಠತೆಯ ಆಧಾರದ ಮೇಲೆ ಸಂಸ್ಥೆಗಳಿಗೆ ಅನುದಾನ ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು. |
|---|---|---|

**ಸಂಖ್ಯೆ: ಹಿಂವಕ 73 ಬಿಎಂಎಸ್ 2022**

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 356 |
| ವಿಧಾನಸಭೆ ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ |
| ಉತ್ತರಿಸುವ ದಿನಾಂಕ | : | 16-02-2022 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ವಿಧಾನಸಭಾ ವ್ಯಾಪ್ತಿಯಲ್ಲಿ ಡಾ॥ಬಿ.ಆರ್.ಅಂಬೇಡ್ಕರ್ ಭವನ ಮತ್ತು ಡಾ॥ ಬಾಬು ಜಗಜೀವನರಾಂ ಭವನಗಳಿಗೆ ಪ್ರಸ್ತಾವನೆ ಇರುವುದು ನಿಜವಲ್ಲವೆ; | 2021-22ನೇ ಸಾಲಿನಲ್ಲಿ ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಹೊಸದಾಗಿ ಡಾ॥ ಬಿ.ಆರ್ ಅಂಬೇಡ್ಕರ್ / ಡಾ॥ ಬಾಬು ಜಗಜೀವನರಾಮ್ ಸಮುದಾಯ ಭವನಗಳ ಮಂಜೂರಾತಿ ಕೋರಿ ಪ್ರಸ್ತಾವನೆಗಳು ಸ್ವೀಕೃತಿಯಾಗಿರುವುದಿಲ್ಲ.<br><br>ಮುಂದುವರೆದು, 2020-21ನೇ ಸಾಲಿನಲ್ಲಿ ಕಿತ್ತೂರು ತಾಲ್ಲೂಕು ಕೇಂದ್ರದಲ್ಲಿ ಡಾ॥ ಬಾಬು ಜಗಜೀವನರಾಮ್ ಭವನ ನಿರ್ಮಾಣ ಮಾಡಲು ಪ್ರಸ್ತಾವನೆ ಸ್ವೀಕೃತಗೊಂಡಿರುತ್ತದೆ. ಈ ಸಂಬಂಧವಾಗಿ ಸೂಕ್ತ ನಿವೇಶನ ಪಡೆದು ದಾಖಲಾತಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸುವಂತೆ ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಬೆಳಗಾವಿ ಜಿಲ್ಲೆ ಇವರಿಗೆ ನಿರ್ದೇಶನ ನೀಡಲಾಗಿರುತ್ತದೆ.<br><br>ಆಯುಕ್ತರಿಂದ ಸೂಕ್ತ ಪ್ರಸ್ತಾವನೆ ಸ್ವೀಕೃತವಾದ ನಂತರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು. |
| ಆ) | ಸದರಿ ಪ್ರಸ್ತಾವನೆಗಳು ಸರ್ಕಾರದ ಯಾವ ಹಂತದಲ್ಲಿವೆ; | |
| ಇ) | ಸದರಿ ಪ್ರಸ್ತಾವನೆಗಳಿಗೆ ಅನುಮೋದನೆ ನೀಡಿ ಅನುದಾನ ಬಿಡುಗಡೆಗೆ ಸರ್ಕಾರದ ಕ್ರಮವೇನು? | |

ಸಕಇ 117 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ. ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 357

ಉತ್ತರ ದಿನಾಂಕ : 16.02.2022

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು, ಸವದತ್ತಿ, ಬೈಲಹೊಂಗಲ ಮತ್ತು ಖಾನಾಪೂರ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಬರುವ ಜನವಸತಿ ಪ್ರದೇಶಗಳಿಗೆ ಶಾಶ್ವತ ಕುಡಿಯುವ ನೀರು ಕಲ್ಪಿಸಲು ಯರಝುರ್ವಿ ಮತ್ತು ದೇಗಾಂವ ಬಹುಗ್ರಾಮ ಕುಡಿಯುವ ನೀರು ಯೋಜನೆಗೆ ಪ್ರಸ್ತಾವನೆಗಳಿರುವುದು ನಿಜವೇ: | ಕಿತ್ತೂರು, ಸವದತ್ತಿ, ಬೈಲಹೊಂಗಲ ಮತ್ತು ಖಾನಾಪೂರ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಬರುವ ಜನವಸತಿ ಪ್ರದೇಶಗಳಿಗೆ ಶಾಶ್ವತ ಕುಡಿಯುವ ನೀರು ಕಲ್ಪಿಸಲು ಯರಝುರ್ವಿ ಮತ್ತು ದೇಗಾಂವ ಬಹುಗ್ರಾಮ ಕುಡಿಯುವ ನೀರು ಯೋಜನೆಗಳ ಪ್ರಸ್ತಾವನೆಗಳಿಗೆ 2021-22ನೇ ಸಾಲಿನ ಬೆಳಗಾವಿ ವಿಭಾಗದ ಜೆ.ಜೆ.ಎಂ ಕ್ರಿಯಾ ಯೋಜನೆಯಲ್ಲಿ ಅನುಮೋದನೆ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಗಳು ಸರ್ಕಾರದ ಯಾವ ಹಂತದಲ್ಲಿವೆ; | ಸವದತ್ತಿ, ಬೈಲಹೊಂಗಲ ಹಾಗೂ ಕಿತ್ತೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಯರಝುರ್ವಿ ಹಾಗೂ ಇತರೆ 95 ಗ್ರಾಮಗಳ PSR ತಯಾರಿಸಲಾಗಿದ್ದು, STAನಲ್ಲಿ ಅನುಮೋದನೆ ಪಡೆಯಲಾಗಿದ್ದು, ಆಡಳಿತಾತ್ಮಕ ಅನುಮೋದನೆ ಪಡೆದು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುವುದು.<br>ಕಿತ್ತೂರು ಹಾಗೂ ಖಾನಾಪೂರ ವಿಧಾನ ಸಭಾ ಕ್ಷೇತ್ರಗಳ ವ್ಯಾಪ್ತಿಗೆ ಬರುವ ದೇಗಾಂವ ಹಾಗೂ ಇತರೆ 165 ಗ್ರಾಮಗಳ ಬಹುಗ್ರಾಮ ಯೋಜನೆಯ ಪ್ರಾಥಮಿಕ ಯೋಜನಾ ವರದಿಯು ತಯಾರಿಕಾ ಹಂತದಲ್ಲಿರುತ್ತದೆ. |
| ಇ) | ಸದರಿ ಎರಡು ಯೋಜನೆಗಳ ಪ್ರಸ್ತಾವನೆಗೆ ಅನುಮೋದನೆ ನೀಡಿ ಅನುದಾನ ಬಿಡುಗಡೆ ಮಾಡಲು ಸರ್ಕಾರದ ಕ್ರಮವೇನು? | ಸವದತ್ತಿ, ಬೈಲಹೊಂಗಲ ಹಾಗೂ ಕಿತ್ತೂರು ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಯರಝುರ್ವಿ ಹಾಗೂ ಇತರೆ 95 ಗ್ರಾಮಗಳ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಪಡೆದು ನಿಯಮಾನುಸಾರ ಟೆಂಡರ್ ಆಹ್ವಾನಿಸಿ ಅನುಷ್ಠಾನಗೊಳಿಸಲು ಕ್ರಮವಹಿಸಲಾಗುವುದು.<br>ಕಿತ್ತೂರು ಹಾಗೂ ಖಾನಾಪೂರ ವಿಧಾನ ಸಭಾ ಕ್ಷೇತ್ರಗಳ ವ್ಯಾಪ್ತಿಗೆ ಬರುವ ದೇಗಾಂವ ಹಾಗೂ ಇತರೆ 165 ಗ್ರಾಮಗಳ ಯೋಜನೆಯ ಪಿ.ಎಸ್.ಆರ್ ತಯಾರಿಕಾ ಹಂತದಲ್ಲಿದ್ದು, ತಾಂತ್ರಿಕ ಹಾಗೂ ಆಡಳಿತಾತ್ಮಕ ಅನುಮೋದನೆ ಪಡೆದು ಯೋಜನೆಗಳ ಅನುಷ್ಠಾನಕ್ಕೆ ಕ್ರಮ ವಹಿಸುವುದು. |

ಸಂ:ಗ್ರಾಕುನೀ&ನೈಇ 63 ಗ್ರಾನೀಸ (4) 2022

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

# ಕರ್ನಾಟಕ ವಿಧಾನ ಸಭೆ

1. ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ)
2. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 358
3. ಉತ್ತರಿಸಬೇಕಾದ ದಿನಾಂಕ : 16.02.2022

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಉದ್ಯೋಗ ಖಾತ್ರಿಯ ಕಾಮಗಾರಿಗಳ ಎಸ್.ಆರ್.ರೇಟ್ 4 ವರ್ಷದಿಂದ ಪರಿಷ್ಕರಣೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; (ವಿವರ ನೀಡುವುದು) | ಲೋಕಪಯೋಗಿ ಇಲಾಖೆಯವರು ಸೂಚಿಸುವ ಕಾಮಗಾರಿಗಳ ಅನುಸೂಚಿತ ದರಪಟ್ಟಿಗಳನ್ನು ಮತ್ತು ಕಾಲಕಾಲಕ್ಕೆ ಪರಿಷ್ಕ್ಕರಿಸುವ ದರಪಟ್ಟಿಗಳನ್ನು ನರೇಗಾ ಯೋಜನೆಯ ಕಾಮಗಾರಿಗಳ ಅನುಷ್ಠಾನದಲ್ಲಿ ಅಳವಡಿಸಿಕೊಳ್ಳಲಾಗುತ್ತಿದೆ. ಸಾಮಾನ್ಯವಾಗಿ ಲೋಕೋಪಯೋಗಿ ಇಲಾಖೆಯವರು ಎರಡು ವರ್ಷಗಳಿಗೊಮ್ಮೆ ಮತ್ತು ಕಾಲಕಾಲಕ್ಕೆ ತುರ್ತು ಸಂದರ್ಭಗಳಲ್ಲಿ ಸಾಮಗ್ರಿಗಳ ದರಗಳು ಹೆಚ್ಚಾದಲ್ಲಿ ಪರಿಶೀಲಿಸಿ ವಿಶೇಷ ಪ್ರಕರಣ ಎಂದು ಪರಿಗಣಿಸಿ ಸಾಮಗ್ರಿಗಳ ದರಗಳನ್ನು ಪರಿಷ್ಕರಿಸಿರುತ್ತಾರೆ. ಈ ರೀತಿ ಪರಿಷ್ಕರಿಸಿದ ದರಪಟ್ಟಿಗಳನ್ನು ಕೇಂದ್ರ ಸರ್ಕಾರದ ನಿರ್ದೇಶನದಂತೆ, ಅಭಿವೃದ್ಧಿಪಡಿಸಿದ SECURE (Software estimate calculation using Rural rates for Employment) ತಂತ್ರಾಂಶದಲ್ಲಿ ಆರೋಹಣಮಾಡಿ ಅದರಂತೆ ನರೇಗಾ ಯೋಜನೆಯ ಕಾಮಗಾರಿಗಳಿಗೆ ಅಂದಾಜು ಪತ್ರಿಕೆಗಳನ್ನು ತಯಾರಿಸಿ, ಅನುಷ್ಠಾನಗೊಳಿಸಲಾಗುತ್ತಿದೆ. |
| ಆ | 4 ವರ್ಷಗಳಲ್ಲಿ ಎಸ್.ಆರ್.ರೇಟ್ ಹೆಚ್ಚಾಗಿರುವುದರಿಂದ ಫಲಾನುಭವಿಯ ಬಾವಿ, ಹೊಲದ ರಸ್ತೆ ಮತ್ತು ಇತರೆ ಕೆಲಸ ಮಾಡಿಸಿಕೊಳ್ಳಬೇಕೆಂದರೆ ಹಳೆಯ ಮತ್ತು ಹೊಸ ಎಸ್.ಆರ್.ರೇಟ್ ನಡುವಿನ ವ್ಯತ್ಯಾಸದ ಮೊತ್ತವನ್ನು ಫಲಾನುಭವಿಗಳೇ ಭರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; (ವಿವರ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ | ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು) | ಕಾಲಕಾಲಕ್ಕೆ ಲೋಕೊಪಯೋಗಿ ಇಲಾಖೆಯವರು ದರಪಟ್ಟಿಗಳನ್ನು ಪರಿಷ್ಕ್ಕರಿಸಿದಂತೆ ನರೇಗಾ ಯೋಜನೆಯ SECURE ತಂತ್ರಾಂಶದಲ್ಲಿ ಆಗಿಂದಾಗ್ಗೆ ಅಳವಡಿಸಿಕೊಳ್ಳಲಾಗುತ್ತಿದೆ. 2021-22ನೇ ಸಾಲಿನಲ್ಲಿ ಲೋಕೊಪಯೋಗಿ ಇಲಾಖೆಯಿಂದ ಸಾಮಗ್ರಿಗಳ ವೆಚ್ಚಗಳನ್ನು ನವೆಂಬರ್, ಡಿಸೆಂಬರ್ ಮತ್ತು ಜನವರಿ ತಿಂಗಳುಗಳಲ್ಲಿ ಪರಿಷ್ಕ್ಕರಿಸಿದ್ದು ಅದರಂತೆ ಪರಿಷ್ಕೃತ ದರಪಟ್ಟಿಗಳನ್ನು SECURE ತಂತ್ರಾಂಶದಲ್ಲಿ ಅಳವಡಿಸಿ ದಿನಾಂಕ 29/01/2022 ರಿಂದ ಅನ್ವಯವಾಗುವಂತೆ ಗ್ರಾಮೀಣಾಭಿವೃದ್ಧಿ ಆಯುಕ್ತಾಲಯದಿಂದ ಆದೇಶ ಹೊರಡಿಸಲಾಗಿದೆ (ಪ್ರತಿ ಲಗತ್ತಿಸಿದೆ) . |
| ಈ | ಯಾವ ಕಾಲಮಿತಿಯೊಳಗೆ ಎಸ್.ಆರ್.ರೇಟ್ ಪರಿಷ್ಕರಣೆ ಮಾಡಲಾಗುತ್ತದೆ? | ಲೋಕೋಪಯೋಗಿ ಇಲಾಖೆಯವರು ಕಾಲಕಾಲಕ್ಕೆ ಸೂಚಿಸುವ ದರಪಟ್ಟಿಗಳನ್ನು/ಪರಿಷ್ಕೃತ ದರಪಟ್ಟಿಗಳನ್ನು ನರೇಗಾ SECURE ತಂತ್ರಾಂಶದಲ್ಲಿ ಅಳವಡಿಸಿಕೊಂಡು ಅದರಂತೆಯೇ ಅಂದಾಜು ಪತ್ರಿಕೆಗಳನ್ನು ತಯಾರಿಸಿ ನರೇಗಾ ಯೋಜನೆಯ ಕಾಮಗಾರಿಗಳನ್ನು ಅನುಷ್ಠಾನಿಸಲಾಗುತ್ತಿದೆ. |

RDC/EGS/50/2022, e-office No:693918

(ಕೆ.ಎಸ್.ಈಶ್ವರಪ್ಪ)

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಗ್ರಾಮೀಣಾಭಿವೃದ್ಧಿ ಮತ್ತು

ಕರ್ನಾಟಕ ಸರ್ಕಾರ
ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ
ಫ್ಲಾಟ್ ನಂ.1-4, ಕೆ.ಎಸ್.ಐ.ಐ.ಡಿ.ಸಿ, ಐಟಿ ಪಾರ್ಕ್, 5ನೇ ಮಹಡಿ,
ಸೌತ್ ಬ್ಲಾಕ್, ರಾಜಾಜಿನಗರ, ಇಂಡಸ್ಟ್ರಿಯಲ್ ಎಸ್ಟೇಟ್ ಬೆಂಗಳೂರು-560044
ದೂ.080-22372738,e-mail:karnregs@gmail.com, karnregs.office@gmail.com

ಸಂಖ್ಯೆ: ಆರ್.ಡಿ.ಸಿ/ಇ.ಜಿ.ಎಸ್/6/2022 ದಿನಾಂಕ: 03-02-2022

## ಅಧಿಕೃತ ಜ್ಞಾಪನ

**ವಿಷಯ:** ಮಹಾತ್ಮ ಗಾಂಧಿ ನರೇಗಾ ಯೋಜನೆಯ ಸಿವಿಲ್ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ತಯಾರಿಸಲು ಲೋಕೋಪಯೋಗಿ ಇಲಾಖೆಯ ದರಪಟ್ಟಿಗಳನ್ನು SECURE ತಂತ್ರಾಂಶದಲ್ಲಿ ಅಳವಡಿಸಿರುವ ಬಗ್ಗೆ.

**ಉಲ್ಲೇಖ:** ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾ.ಇಲಾಖೆ ಸಚಿವರ ಪತ್ರ ಸಂಖ್ಯೆ: ಗ್ರಾ.ಅ.ಪಂ.ರಾ.ಸ:ನ:345:2021, ದಿನಾಂಕ: 07-12-2021

*****

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಹಾತ್ಮ ಗಾಂಧಿ ನರೇಗಾ ಯೋಜನೆಯ ಸಿವಿಲ್ ಕಾಮಗಾರಿಗಳ ಅಂದಾಜು ಪಟ್ಟಿಯನ್ನು ತಯಾರಿಸಲು ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು SECURE ತಂತ್ರಾಂಶವನ್ನು ತಯಾರಿಸಿದ್ದು, ಅದರಂತೆ ಪ್ರತಿ ವರ್ಷ ಕರ್ನಾಟಕದಲ್ಲಿ ಲೋಕೋಪಯೋಗಿ ಇಲಾಖೆಯವರು ಹೊರಡಿಸುವ 09 ವೃತ್ತದ ದರಪಟ್ಟಿ (SoR) ಯನ್ನು SECURE ತಂತ್ರಾಂಶದಲ್ಲಿ ಅಳವಡಿಸಲಾಗುತ್ತಿದ್ದು, ಮುಂದುವರೆದು ಲೋಕೋಪಯೋಗಿ ಇಲಾಖೆಯವರು ಪ್ರಸಕ್ತ ಸಾಲಿನಲ್ಲಿ ಸಾಮಗ್ರಿಗಳಾದ ಸಿಮೆಂಟ್ ಮತ್ತು ಕಬ್ಬಿಣದ ದರಗಳನ್ನು ಪರಿಷ್ಕರಿಸಿದ್ದು, ಸದರಿ ಪರಿಷ್ಕೃತ ದರಗಳನ್ನು SECURE ತಂತ್ರಾಂಶದಲ್ಲಿ ಅಳವಡಿಸಲಾಗಿರುತ್ತದೆ.

SECURE ತಂತ್ರಾಂಶದಲ್ಲಿ ಅಳವಡಿಸಿರುವ ಪರಿಷ್ಕೃತ ದರಗಳು ದಿನಾಂಕ: 29-01-2022 ರಿಂದ ಅನ್ವಯವಾಗುತ್ತದೆ. ಕಾಮಗಾರಿಗಳ ಅಂದಾಜು ಪತ್ರಿಕೆಯನ್ನು ಈ ನೂತನ ದರಗಳನ್ವಯ ತಯಾರಿಸಿ ಕಾಮಗಾರಿಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಮೂಲಕ ತಿಳಿಸಲಾಗಿದೆ.

ಆಯುಕ್ತರು, ಗ್ರಾಮೀಣಾಭಿವೃದ್ಧಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

<u>ಪ್ರತಿಯನ್ನು:</u>

1. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳು ಇವರ ಮಾಹಿತಿಗಾಗಿ.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರ ಆಪ್ತ ಕಾರ್ಯದರ್ಶಿಗಳು ಇವರ ಮಾಹಿತಿಗಾಗಿ.
3. ಆಯುಕ್ತರು ಗ್ರಾಮೀಣಾಭಿವೃದ್ಧಿ ಇವರ ಆಪ್ತ ಸಹಾಯಕರ ಶಾಖೆಗೆ ಮಾಹಿತಿಗಾಗಿ.
4. ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಮಾಹಿತಿಗಾಗಿ ಹಾಗೂ ಮುಂದಿನ ಕ್ರಮಕ್ಕಾಗಿ.

5. ಮುಖ್ಯ ಅಭಿಯಂತರರು, ಬೆಂಗಳೂರು, ಧಾರವಾಡ, ಕಲಬುರಗಿ, ಶಿವಮೊಗ್ಗ ಲೋಕೋಪಯೋಗಿ ಇಲಾಖೆ ಇವರ ಮಾಹಿತಿಗಾಗಿ.
6. ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆಯ ಬೆಳಗಾವಿ, ಬಳ್ಳಾರಿ, ಬೆಂಗಳೂರು, ಕಲಬುರಗಿ, ಮೈಸೂರು, ಹಾಸನ, ಮಂಗಳೂರು, ಶಿವಮೊಗ್ಗ ಮತ್ತು ಧಾರವಾಡ ವೃತ್ತ ಇವರ ಮಾಹಿತಿಗಾಗಿ.
7. ಮುಖ್ಯ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಮಾಹಿತಿಗಾಗಿ.
8. ಅಧೀಕ್ಷಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ ಬೆಳಗಾವಿ, ಬಳ್ಳಾರಿ, ಬೆಂಗಳೂರು, ಕಲಬುರಗಿ, ಮೈಸೂರು, ಹಾಸನ, ಮಂಗಳೂರು, ದಾವಣಗೆರೆ ಮತ್ತು ಧಾರವಾಡ ವೃತ್ತ ಇವರ ಮಾಹಿತಿಗಾಗಿ.
9. ಮುಖ್ಯ ಕಾರ್ಯಾಚರಣೆ ಅಧಿಕಾರಿ, ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.
10. ಜಂಟಿ ನಿರ್ದೇಶಕರು (ತಾಂತ್ರಿಕ/ಆಡಳಿತ/ತೋಟಗಾರಿಕೆ), ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.
11. ಮುಖ್ಯ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಆಯುಕ್ತಾಲಯ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.
12. ಕಛೇರಿ ಕಡತಕ್ಕೆ.

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 359 |
| ವಿಧಾನ ಸಭೆಯ ಸದಸ್ಯರ ಹೆಸರು | : | ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) |
| ಉತ್ತರಿಸಬೇಕಾದ ಸಚಿವರು | : | ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 16.02.2022 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಿಂದ ತೋಟಗಾರಿಕೆ ಇಲಾಖೆಯಿಂದ ಚಿಕ್ಕಮಗಳೂರು ಜಿಲ್ಲೆಗೆ ಮಂಜೂರು, ಬಿಡುಗಡೆ, ಖರ್ಚು ಮಾಡಿರುವ ಹಾಗೂ ಖರ್ಚಾಗದೇ ಬಾಕಿ ಉಳಿದಿರುವ ಅನುದಾನವೆಷ್ಟು; (ವಿಧಾನಸಭಾ ಕ್ಷೇತ್ರವಾರು, ವರ್ಷವಾರು, ಯೋಜನೆವಾರು ಸಂಪೂರ್ಣ ವಿವರವನ್ನು ನೀಡುವುದು) | ಕಳೆದ 3 ವರ್ಷಗಳಿಂದ ಅಂದರೆ, 2018-19 ರಿಂದ 2021-22 ಜನವರಿ ಅಂತ್ಯದವರೆಗೆ ತೋಟಗಾರಿಕೆ ಇಲಾಖೆಯಿಂದ ಚಿಕ್ಕಮಗಳೂರು ಜಿಲ್ಲೆಗೆ ಮಂಜೂರು, ಬಿಡುಗಡೆ, ಖರ್ಚು ಮಾಡಿರುವ ಹಾಗೂ ಖರ್ಚಾಗದೇ ಬಾಕಿ ಉಳಿದಿರುವ ಅನುದಾನ ವಿವರವು ಈ ಕೆಳಕಂಡತಿದೆ. |

(Rs. In lakhs) (ರೂ.ಲಕ್ಷಗಳಲ್ಲಿ)

| ಕ್ರ. ಸ | ವಿಧಾನಸಭಾ ಕ್ಷೇತ್ರ Constituency | ಒಟ್ಟು (2018-19 ರಿಂದ 2021-22 ಜನವರಿ ಅಂತ್ಯದವರೆಗೆ) Total (from 2018-19 to 2021-22 Jan end) | | | |
|---|---|---|---|---|---|
| | | ಮಂಜೂರು Sanction | ಬಿಡುಗಡೆ Release | ವೆಚ್ಚ Expenditure | ಉಳಿಕೆ Balance |
| 1 | ಚಿಕ್ಕಮಗಳೂರು Chikkamagalur | 2835.80 | 2214.95 | 2184.23 | 30.72 |
| 2 | ಕಡೂರು Kadur | 6791.29 | 5605.08 | 5038.50 | 566.59 |
| 3 | ಮೂಡಿಗೆರೆ Mudigere | 772.77 | 982.89 | 966.96 | 15.93 |
| 4 | ಶೃಂಗೇರಿ Shringeri | 2327.67 | 2042.34 | 2011.00 | 31.34 |
| 5 | ತರೀಕೆರೆ Tarikere | 2201.78 | 1882.93 | 1837.86 | 45.08 |
| | ಒಟ್ಟು | 14929.01 | 12728.21 | 12038.53 | 689.67 |

ವಿಧಾನಸಭಾ ಕ್ಷೇತ್ರವಾರು, ವರ್ಷವಾರು, ಯೋಜನೆವಾರು ಸಂಪೂರ್ಣ ವಿವರವನ್ನು ಅನುಬಂಧ-1A, 1B, 1C, 1D, 1E ಗಳಲ್ಲಿ ಒದಗಿಸಿದೆ.

| | | |
|---|---|---|
| | | The expenditure details of Chikkamagalur district during last three years i.e., 2018-19 to 2021-22 January end, is mentioned above. Constituency wise, year wise and scheme wise details are furnished in annexure-1A, 1B, 1C, 1D, 1E. |
| ಆ) | ಕಳೆದ 3 ವರ್ಷಗಳಿಂದ ಈ ಜಿಲ್ಲೆಯಲ್ಲಿ ಇಲಾಖೆಯಿಂದ ಕೈಗೊಂಡಿರುವ ಕಾಮಗಾರಿಗಳಾವುವು; ಪೂರ್ಣಗೊಂಡಿರುವ ಹಾಗೂ ಪ್ರಗತಿಯಲ್ಲಿರುವ ಕಾಮಗಾರಿಗಳಾವುವು? (ವಿಧಾನಸಭಾ ಕ್ಷೇತ್ರವಾರು, ವರ್ಷವಾರು ಸಂಪೂರ್ಣ ವಿವರವನ್ನು ನೀಡುವುದು) | ಕಳೆದ 3 ವರ್ಷಗಳಿಂದ ಅಂದರೆ, 2018-19 ರಿಂದ 2021-22 ಜನವರಿ ಅಂತ್ಯದವರೆಗೆ, ವಿಧಾನಸಭಾ ಕ್ಷೇತ್ರವಾರು ಇಲಾಖೆಯಿಂದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಕೈಗೊಂಡಿರುವ ಕಾಮಗಾರಿಗಳ ವಿವರವನ್ನು ಅನುಬಂಧ-2A, 2B, 2C & 2Dರಲ್ಲಿ ಒದಗಿಸಿದೆ.<br>The work details of Chikkamagalur district during last three years i.e., 2018-19 to 2021-22 January end, is furnished in annexures 2A, 2B, 2C & 2D. |

**No. HORTI 51 HGM 2022**

(ಮುನಿರತ್ನ)
ತೋಟಗಾರಿಕೆ ಹಾಗೂ ಯೋಜನೆ
ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು

